# ಮುಕ್ತಿಮಾರ್ಗ

[ಸಾಮಾಜಿಕ ಕಾದಂಬರಿ]



ಎಚ್. ಎಸ್. ಕೃಷ್ಣಸ್ವಾಮಿ



ಎಸ್. ಎಸ್. ಎನ್. ಪುಸ್ತಕ ಪ್ರಕಟನಾಲಯ

ಹೊಸ ಮಾರ್ಕೆಟ್, ಬೆಂಗಳೂರು ನಗರ

*

# ಮೊದಲ ಮಾತು

ನನ್ನ ಈ ಮೊದಲನೆಯ ಕಾದಂಬರಿಯನ್ನು ವಾಚಕರ ಮಡಿಲಿಗೆ ಅರ್ಪಿಸುವ ಮುನ್ನ ಒಂದೆರಡು ಮಾತು ಹೇಳಿಕೊಳ್ಳಬೇಕಾಗಿದೆ. ಇಂದು ಭಾರತದ ಅತ್ಯಂತ ಪ್ರಧಾನ ಸಮಸ್ಯೆಗಳಲ್ಲೊಂದಾದ ಗ್ರಾಮಸುಧಾರಣೆಯೇ ಈ ಕಾದಂಬರಿಗೆ ಆಧಾರ ಕಾಲೇಜು ಪದವೀಧರನಾದ ತರುಣನೊಬ್ಬ, ಗ್ರಾಮಸುಧಾರಣೆ ಮಾಡಬೇಕೆಂಬ ಉತ್ಕಟಾಕಾಂಕ್ಷೆಯಿಂದ ಹಳ್ಳಿಗೆ ಹೋಗಿ ನೆಲಸಿದರೆ ಅವನು ಸಾಮಾನ್ಯವಾಗಿ ಕಾಣತಕ್ಕ ನೋಟವೆಂಥದು? ಅವನು ಅನುಸರಿಸುವ ದಾರಿ ಯಾವುದು? ಅವನು ಎದುರಿನಬೇಕಾದ ಸಮಸ್ಯೆಗಳಾವುವು? ಅವನ ಪ್ರಯತ್ನ ಎಷ್ಟರಮಟ್ಟಿಗೆ ಸಫಲವಾದೀತು?—ಎಂಬುದನ್ನು ವಿವರಿಸತಕ್ಕದ್ದು ಈ ಕಾದಂಬರಿಯ ಉದ್ದೇಶ ಈ ಉದ್ದೇಶ ಸಾಧನೆಯಲ್ಲಿ ಯಾವ ಒಂದು ವಿಚಾರವನ್ನೂ ಇದು ಹೀಗೇ ಎಂದು ಸಿದ್ಧಾಂತ ಮಾಡಹೋಗದೆ ಸಮಸ್ಯೆಗಳನ್ನಷ್ಟೆ ಎತ್ತಿ ತೋರಿಸಿದ್ದೇನೆ. ಹಳ್ಳಿಯ ಸಮಸ್ಯೆಗಳನ್ನು ಬಿಡಿಯಾಗಿ ನೋಡುವುದಕ್ಕಿಂತ ಇಡಿಯಾಗಿ ನೋಡಬೇಕು, ಅಖಿಲ ಭಾರತ ದೃಷ್ಟಿಯಿಂದ ಈ ಸಮಸ್ಯಾ ಪರಿಹಾರ ಮಾರ್ಗಾನುಸರಣೆ ಮಾಡಬೇಕು, ಅಲ್ಲಿ-ಇಲ್ಲಿ ಒಬ್ಬಿಬ್ಬರು ಕೈಕೊಳ್ಳುವ ಸುಧಾರಣಾ ಕಾರ್ಯ ಸಾಲದು ಎಂಬುದು ನನ್ನ ಅಭಿಪ್ರಾಯ

ಈ ಕಾದಂಬರಿಯ ವ್ಯಕ್ತಿಗಳಾದ ಚಂದ್ರಶೇಖರ, ಚೆನ್ನಯ್ಯ, ಸುಬ್ಬಯ್ಯಗೌಡರು, ಚೆನ್ನಮ್ಮ—ಇವರೆಲ್ಲ ನನ್ನ ಅನುಭವಲೋಕದಲ್ಲಿ ಹಲವಾರು ಸಾರಿ ಬಂದು ಹೋಗಿದಾರೆ ಈ ನನ್ನ ಅನುಭವದ ವ್ಯಕ್ತಿಗಳನ್ನಷ್ಟೆ ಇಲ್ಲಿ ಚಿತ್ರಿಸಿದೇನೆ.

ಇದನ್ನು ಬರೆದದ್ದು ೧೯೪೬ರ ಡಿಸೆಂಬರ್ ತಿಂಗಳಲ್ಲಿ, ಇದೀಗ ಅಚ್ಚಾಗುತ್ತಿದೆ ಆಗ್ಗೆ-ಈಗ್ಗೆ ನನ್ನ ದೃಷ್ಟಿಕೋನದಲ್ಲಿ ಎಷ್ಟೋ ಬದಲಾವಣೆಯಾಗಿರತಕ್ಕದ್ದು ಸಹಜವೇ ಆಗಿದೆ. ಆದರೆ ಅಂದಿನ ನನ್ನ ಭಾವನೆ

ಗಳನ್ನು ಒತ್ತಿಹಾಕುವಂಥ ಎದೆಗಾರಿಕೆ ನನ್ನ ಇಂದಿನ ವ್ಯಕ್ತಿತ್ವಕ್ಕೆ ಬರಲಾರದು. ಆದ್ದರಿಂದ ಅದನ್ನು ಈಗ ಅಚ್ಚಿನ ಮನೆಗೆ ಕಳಿಸಿದಾಗ ಯಾವೊಂದು ಹೆಚ್ಚು ಬದಲಾವಣೆಯನ್ನೂ ಮಾಡದೆ ಮೃದುವಾಗಿ ಕೈಯಾಡಿಸಿ ಕಳಿಸಿದ್ದೇನೆ.

ಈ ಕಾದಂಬರಿಯು ಪ್ರಕಟನೆಯಲ್ಲಿ ನೆರವಾದ ಎಸ್. ಎಸ್. ಎನ್. ಬುಕ್ ಡಿಪೋವಿನ ಶ್ರೀ ಎಂ ರಾಮರಾಯರಿಗೂ ಮುದ್ರಕರಾದ ಓಂಕಾರ್ ಪ್ರೆಸ್ಸಿನವರಿಗೂ ಈ ಕಾದಂಬರಿ ಬರೆಯಲು ಕಾರಣರಾದ ಗೆ|| ಎಂ. ಎಸ್. ನಾರಾಯಣರಾಯರಿಗೂ ನನ್ನ ಕೃತಜ್ಞತೆಗಳು ಸಲ್ಲಬೇಕಾಗಿವೆ.

ಏಪ್ರಿಲ್, ೧೯೪೮. —ಎಚ್ಚೆಸ್ಕೆ.

# ಮುಕ್ತಿಮಾರ್ಗ

## ೧

ಬೇಸಗೆಯ ಬಿರುಬಿಸಿಲು ಆಗತಾನೆ ಆರುತ್ತಿತ್ತು. ನೇಸರಿನ ಓರೆ ಗಿರಣ ನೀಲಾವರ ಸ್ಟೇಷನ್ನಿನ ಮುಂದೆ ಕಣ್ಣು ಹಾಯುವವರೆಗೂ ಹಬ್ಬಿದ್ದ ರೈಲುಕಂಬಿಯ ಮೇಲೆ ಬಿದ್ದು ವಜ್ರದ ಸರಳು ಹಾಕಿದ ಹಾಗೆ ತೋರುತ್ತಿತ್ತು ಎಂದಿನ ಹಾಗೆ ಅಂದು ಸಂಜೆಯೂ ಜನ ಮೈಸೂರು ರೈಲು ಕಾಯುತ್ತ ದಟ್ಟೈಸಿ ನಿಂತಿದ್ದರು.

ರೈಲು ಬಂದು ನೀಲಾವರದಲ್ಲಿ ನಿಂತದ್ದೇ ತಡ, ನಿಲುಮನೆಯ ತುಂಬ ಜನ ಇಳಿದರು, ಹತ್ತುವವರು ಹತ್ತಿದರು. ಸ್ವಲ್ಪ ಹೊತ್ತಿನ ಹಿಂದೆ ಪ್ರತೀಕ್ಷೆಯ ತೌರಾಗಿದ್ದ ಸ್ಟೇಷನ್ನು 'ಶಬ್ದಬ್ರಹ್ಮದ ದೇಗುಲ' ವಾಯಿತು. ಮಾತು ಅಲೆಯಲೆಯಾಗಿ, ರೈಲುಕಂಬಿಯನ್ನು ದಾಟಿ ಓಡಿಬರುತ್ತಿದ್ದ ಜನ ಸಂದೋಹಕ್ಕಿಂತ ಮುಂದಾಗಿ, ಬರುತ್ತಿತ್ತು.

ರೈಲುಕಂಬಿಯ ಆಚೆ, ಸ್ಟೇಷನ್ನಿನ ಇದಿರುಬದಿಯಲ್ಲಿ, ಮೌನವಾಗಿ ನಿಂತಿದ್ದ ಬಸ್ಸು ಒಂದೇಸಮನೆ ಮೊರೆಯಿಡಲಾರಂಭಿಸಿತು. ಜನ ಈ ಮೊರೆ ಕೇಳಿಯೋ ಧಾವಿಸುತ್ತಿದ್ದದ್ದು.

ಒಂದು ಕ್ಷಣದಲ್ಲೆ ಬಸ್ಸಿನ ತುಂಬ ಹುಣಿಸೆಹಣ್ಣು ಪೇರಿಸಿದ ಹಾಗೆ ಜನ ತುಂಬಿಕೊಂಡರು ಬಸ್ಸಿನ ತಲೆಯ ಮೇಲೆ ಗೋಪುರಾಕಾರವಾಗಿ ಸಾಮಾನು ಹೇರಿದರು ಬಸ್ಸುಚಾಲಕ ಯಥಾಸ್ಥಾನದಲ್ಲಿ ಪ್ರತಿಷ್ಠಿತನಾಗಿ, ಮಫ್ಲರನ್ನು ಕತ್ತಿಗೂ ತಲೆಯ ಟೋಪಿಯ ಮೇಲೂ ಸುತ್ತಿ, 'ಎಲ್ಲಾ ಬಂದ್ರೇನಪ್ಪ, ದಸ್ತಗೀರ್.' ಎಂದ, ಕಂಡಕ್ಟರನ್ನು ಕುರಿತು.

'ಓಹೋ! ರೈಟ್.' ಎಂದ ಕಂಡಕ್ಟರು.

ಬಸ್ಸು ಶಬ್ದ ಮಾಡುತ್ತಾ ಒಂದು ಸಲ ಹಿಂದಕ್ಕೂ ಮುಂದಕ್ಕೂ ಜಗ್ಗಾಡಿ ಅತಿ ಪ್ರಯಾಸದಿಂದ ಹೊರಟಿತು. ಇದು ಸ್ವಲ್ಪ ದೂರ ಹೋಗು

ವುದರಲ್ಲಿ ಮೈಸೂರು ರೈಲೂ ಬುಸ್ ಬುಸ್ ಎನ್ನುತ್ತ ತನ್ನ ಗುರಿಯತ್ತ ಸಾಗಿತು.

ನೀಲಾವರ ಸ್ಟೇಷನ್ನಿಗೂ ಮಾಯಂದ ಹಳ್ಳಿ ಗೇಟಿಗೂ ಅಂಥ ದೂರವೇನಿಲ್ಲ—ಆರೂವರೆ ಮೈಲಿ. ಬಸ್ಸು ಇಲ್ಲಿ ನಿಂತು, ಅಲ್ಲಿ ನಿಂತು. ಡ್ರೈವರು ಕಂಡಕ್ಟರು ರುಜು ಮಾಡುವಲ್ಲೆಲ್ಲ ಮಾಡಿ, ಇಳಿಯುವವರನ್ನು ಇಳಿಸಿ ಹತ್ತುವವರಿದ್ದರೆ ಹತ್ತಿಸಿಕೊಂಡು ಎಷ್ಟೇ ಸಾವಕಾಶವಾಗಿ ನಡೆದರೂ ಅಬ್ಬಬ್ಬಾ ಎಂದರೆ ಇಪ್ಪತ್ತು ನಿಮಿಷದ ಪ್ರಯಾಣ. ಆದರೆ ಆ ಬಸ್ಸಿನ ಅವತಾರ ನೋಡಿದರೆ ಆವೊತ್ತು ಅದು ಹೋದೀತೇ ಎಂಬುದೇ ಸಂಶಯವಾಗಿತ್ತು ಯುದ್ಧ ಬಂದು ಅದರ ಮೂತಿಯ ಮೇಲಣ ಮುಚ್ಚಳದ ತಗಡು ಕಳಚಿಹೋಗಿತ್ತು. ಒಳಗಿನ ಯಂತ್ರದ ಮೇಲೆಲ್ಲಾ ಧೂಳು ಧಾರಾಳವಾಗಿ ಕೂರಬಹುದಾಗಿತ್ತು ಹಳ್ಳಿಯ ರಸ್ತೆ ಎಂದ ಮೇಲೆ ಧೂಳಿಗೆ ಕೊರತೆಯೆ? ಸಾಲದ್ದಕ್ಕೆ ಪೆಟ್ರೋಲ್ ಬದಲು ಇದ್ದಿಲು ಬಂದಿತ್ತು ಆಗಾಗ್ಗೆ ಯಂತ್ರ ಕಾದು ಹೂಗೆಯಾಡಲಾರಂಭಿಸಿದರೆ ತಣ್ಣೀರಿನ ಸೇಚನೆ ಮಾಡಿ ತಣ್ಣಗೆ ಮಾಡಬೇಕಾಗುತ್ತಿತ್ತು ಇದನ್ನೆಲ್ಲಾ ನೋಡುತ್ತಾ ಮುಂದೆ ಕುಳಿತಿದ್ದ ಚಂದ್ರಶೇಖರ ಈ ಬಸ್ಸು ಇಂದು ಮಾಯಂದ ಹಳ್ಳಿ ಸೇರೀತೇ? ಎಂದುಕೊಂಡ ಇದನ್ನು ನೆಚ್ಚಿ ಕೂತಿದ್ದೇವಲ್ಲಾ ಎಂದು ತನ್ನಷ್ಟಕ್ಕೆ ತಾನೇ ನಕ್ಕ. ಒಂದು ರೀತಿಯಲ್ಲಿ ನಮ್ಮ ಬಾಳು ಇವೊತ್ತು ಈ ಯಂತ್ರದ ಹಾಗೆ ಕೆಟ್ಟು ಕೂತಿದೆ. ಹಳೆಯದು ಹಾಳತ ತಪ್ಪಿದೆ ಹೊಸದರ ಸ್ಥಾನ ಉಪಯುಕ್ತವಾಗಿಲ್ಲ. ಈ ಎರಡರ ಹೊಲೆಬೆರಕೆಯನ್ನು ನಂಬಿ ಕೂತ ನಾವು ಹಾಳಾಗುತ್ತಾ ಇದೇವೆ, ಎಂದುಕೊಂಡ.

ಚಂದ್ರಶೇಖರ ಮಾಯಂದ ಹಳ್ಳಿ ಪಟೇಲ್ ಸುಬ್ಬಯ್ಯಗೌಡರ ಮಗ ಮೈಸೂರಿನಲ್ಲಿ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದು ಅದನ್ನು ಮುಗಿಸಿಕೊಂಡು ಆಗತಾನೆ ತನ್ನ ಹುಟ್ಟಿದ ಹಳ್ಳಿಗೆ, ತನ್ನ ನೇಹದ ಜನದ ಮಧ್ಯಕ್ಕೆ ಬರುತ್ತಾ ಇದ್ದ ಭವಿಷ್ಯ ಅವನ ಮುಂದೆ ಭವ್ಯವಾಗಿ ನಿಂತಿತ್ತು. ಕಾಲೇಜಿನಲ್ಲಿ ಅವನು ಉತ್ತಮ ವಿದ್ಯಾರ್ಥಿಯೂ ಹೌದು. ಅವನು ಪರೀಕೆ ಮುಗಿಸಿ ಊರಿಗೆ ಹೊರಡುವ ಮುನ ತನ ನಚಿನ

ಅರ್ಥಶಾಸ್ತ್ರದ ಪ್ರೊಫೆಸರನ್ನು ನೋಡಲು ಹೋಗಿದ್ದ. ಗುರುಗಳು ಪ್ರೀತಿಯಿಂದ ಚಂದ್ರಶೇಖರನತ್ತ ನೋಡಿ ಮುಗುಳು ನಗುತ್ತಾ,

'ಮುಂದೇನು ಮಾಡುತೀಯ, ಚಂದ್ರಶೇಖರ'' ಎಂದರು.

ಚಂದ್ರಶೇಖರ ಒಂದು ಗಳಿಗೆ ಕಣ್ಣನ್ನು ಅರೆ ಮುಚ್ಚಿ ಧ್ಯಾನಾಸಕ್ತನಾದ,— ಈ ಪ್ರಶ್ನೆಗೆ ಮೊದಲೇ ತನ್ನಲ್ಲಿ ನಿರ್ಧರವಾಗಿದ್ದ ಉತ್ತರವನ್ನು ಯುಃಕ್ತವಾದ ಮಾತಿನಲ್ಲಿ ಗುರುವಿನ ಮುಂದಿಡಲೋ ಎಂಬಂತೆ.

ಅಷ್ಟರಲ್ಲಿ ಅವರೇ ಮಾತು ಮುಂದುವರಿಸಿದರು :

'ನೋಡಿಲ್ಲಿ, ಚಂದ್ರಶೇಖರ್'

''ಸಾರ್'

'ನಮ್ಮ ವಿದ್ಯಾಭ್ಯಾಸದಲ್ಲಿ ಒಂದು ತಪ್ಪಿದೆ ಕಾಲೇಜು ವಿದ್ಯಾಭ್ಯಾಸ ಒಳ್ಳೆಯದು ಒಪ್ಪಿಕೊಳ್ಳೋಣ ಆದರೆ ವಿದ್ಯಾರ್ಥಿಗಳಿಗೆ ಒಂದು ಗೊತ್ತು ಬೇಡವೆ? ಗುರಿ ಬೇಡವೆ? ಎಲ್ಲರೂ ಒಟ್ಟೊಟ್ಟಿಗೆ ಕಾಲೇಜಿನಲ್ಲಿ ಕುರಿಯ ಹಾಗೆ ತುಂಬೋದು. ವಿದ್ಯೆ ಮುಗಿಸಿ ಪೆನಾ ಹಿಡಿದು ಒಟ್ಟೊಟ್ಟಿಗೆ ಕಚೇರಿಗಳಿಗೆ ನುಗ್ಗೋದು. ಇವರಲ್ಲಿ ಹಿಂದಿದ್ದು ಜಾಣತನದಿಂದ ವರ್ತಿಸಿದವನೇ ಗೆದ್ದ. ಮುಂದಿದ್ದವನು ಮುಗ್ಗರಿಸಿದ ಹೀಗೆ ಕೆಲವರಿಗೆ ಕೆಲಸ ಸಿಕ್ಕಿ, ಉಳಿದವರು ನಿರಾಶರಾಗಿ, 'ಜೀವನ ಬದುಕೋದಕ್ಕೆ' ಎನ್ನುವ ತತ್ವದ ಬದಲು, 'ನರಳೋದಕ್ಕೆ' ಎನ್ನುವುದೇ ಒಪ್ಪುತ್ತೆ ಎಂದುಕೊಂಡು ಗೋಳು ಬಾಳು ಬಾಳಬೇಕಾದ ಸ್ಥಿತಿ ಬಂದಿದೆ. ಶತಮಾನದಿಂದಲೂ ಪರಂಪರಾದತ್ತವಾಗಿ ಬಂದದ್ದು ಈ ಪದ್ಧತಿ. ದೇಶದ ಜನಬಲ ಹೀಗೆ ಹಾಳಾಗೋದು ತಪ್ಪಿಸಬೇಡವೆ? ಹುಡುಗರು ಮುಂದಾಗಿಯೇ ತಮ್ಮ ಒಲವು ಯಾವುದಕ್ಕೆ, ತಮ್ಮ ಗುರಿ ಎತ್ತ, ಎನ್ನುವುದನ್ನು ನಿರ್ಧರಿಸಿಕೊಂಡು ಮುನ್ನಡೆದರೆ ಅವರಿಗೂ ಕ್ಷೇಮ, ದೇಶಕ್ಕೂ ಕಲ್ಯಾಣ.'

'ಕ್ಷಮಿಸಿ ಸಾರ್. ಇಲ್ಲಿ ನನ್ನದೊಂದು ಮಾತಿದೆ.' ಎಂದ, ಚಂದ್ರಶೇಖರ'

'ಏನದು?'

'ಇಂಥ ಸ್ಥಿತಿಗೆ ನಮ್ಮ ದೇಶದಲ್ಲಿ ಉಪಯುಕ್ತವಾದ ವೃತ್ತಿಶಿಕ್ಷಣ ಇಲ್ಲದೆ ಇರೋದೇ ಕಾರಣ. ಬೇರೇನೂ ಕಾಣದ ವಿದ್ಯಾರ್ಥಿಗಳು ಗತ್ಯಂತರವಿಲ್ಲದೆ ಕಾಲೇಜಿಗೆ ಬರುತ್ತಾರೆ ಅಲ್ಲಿಂದ ಹೊರಬಂದ ಮೇಲೆ ಅವರಿಗೆ ಇರೋದು ಒಂದೇ ದಾರಿ. ಇನ್ನು ಗುರಿ ಏನು ಬಂತು? ನಿರ್ಧಾರ ಏನು ಬಂತು?'

'ಅದೇನೋ ನಿಜ ಎನ್ನು. ಅದಕ್ಕೆ ವಿದ್ಯಾಭ್ಯಾಸ ಪದ್ಧತಿಯ ಬುಡಾನೇ ಸರಿ ಇಲ್ಲವಲ್ಲ. ಅದು ಸರಿ, ನೀನೇನು ಮಾಡಬೇಕೆಂತ ಇದೀಯೆ? ಇನ್ನೂ ಮುಂದಕ್ಕೆ ಅರ್ಥಶಾಸ್ತ್ರದಲ್ಲೆ ವ್ಯಾಸಂಗ ಮುಂದುವರಿಸುವುದಾದರೆ ನಿನಗೆ ಎಲ್ಲಾ ಸಹಾಯಾನೂ ಒದಗಿಸೋದಕ್ಕೆ ನನಗೆ ಸಂತೋಷವೇ. ಮುಂದೆ ಇದೇ ಕಾಲೇಜಿನಲ್ಲೇ ಸೇರಿದರೆ ನಿನ್ನ ಪ್ರತಿಭೆಯಿಂದ ಅನೇಕ ವಿದ್ಯಾರ್ಥಿಗಳಿಗೆ ಉಪಯೋಗ ಆಗುತ್ತೆ. ಏನು ಹೇಳುತೀ? ನಿನ್ನ ಮನಸ್ಸೇನು?'

'ಆದರೆ ನನ್ನ ಬಾಳಿನ ಗುರಿ ಆಗಲೇ ನಿರ್ಧರಿಸಿಕೊಂಡಿದೇನೆ ಸಾರ್. ಹೌದು, ನಾನು ಮುಂದೆ ಅಭ್ಯಾಸ ಮಾಡಿ ಇಲ್ಲೇ ಉಪಾಧ್ಯಾಯನಾದರೆ ವಿದ್ಯಾರ್ಥಿಗಳಿಗೆ ನನ್ನಿಂದ ಏನಾದರೂ ಉಪಯೋಗ ಆಗಬಹುದು. ಆದರೆ ಅದಕ್ಕಿಂತ ಹೆಚ್ಚಾಗಿ ನನ್ನ ಹಳ್ಳಿಯ ಮುಗ್ಧ ಜನದ ಒಲವು ನನ್ನನ್ನು ಅತ್ತ ಸೆಳೀತಾ ಇದೆ ಅವರ ಪ್ರೀತಿಯ ಹುಡುಗ ನಾನು. ಅಲ್ಲಿ ಅಷ್ಟೊಂದು ಜನ ವಿದ್ಯೆಯ ಗಂಧವಿಲ್ಲದೆ, ಒಳ್ಳೆಯ ಬಾಳಿನ ಹಾದಿಯರಿಯದೆ, ಬಡತನದಲ್ಲಿ ಬಾಳು ನೂಕುತಾ ಇರುವಾಗ ನಾನು ಹೇಗೆ ತಾನೆ ಇಲ್ಲಿರಲಿ? ಈ ನಿರ್ಧಾರವನ್ನ ನಾನು ಬಹು ವರ್ಷದ ಹಿಂದೆಯೇ—ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ—ಮಾಡಿಕೊಂಡೆ. ಒಂದು ಸಲ ನಮ್ಮ ಹೈಸ್ಕೂಲು ಸಂಘದ ಆಶ್ರಯದಲ್ಲಿ "ಹಳ್ಳಿಯ ಬಾಳು ಒಳ್ಳೇದೋ ಪಟ್ಟಣದ ಬಾಳು ಒಳ್ಳೇದೋ" ಎಂತ ಒಂದು ಚರ್ಚೆ ಏರ್ಪಡಿಸಿದ್ದರು. ನಾನೇನೋ ಹಳ್ಳಿಯ ಬಾಳೇ ಒಳ್ಳೇದು ಎಂತ ಮಾತಾಡಿದೆ ಅದಕ್ಕೆ ಮತವೂ ಬಂತು. ಆದರೆ ಆಮೇಲೆ ಯೋಚಿಸಿದಷ್ಟು ಈ ವಿಚಾರದಲ್ಲಿ ಸಂಶಯ ಬಂತು. ಹಳ್ಳಿಯ ಬಾಳು ಒಳ್ಳೇದು, ಹೌದು, ಇತ್ತು, ಒಂದು ಕಾಲದಲ್ಲಿ! ಆದರೆ ಈಗ? ಈ ಪ್ರಶ್ನೆ ಎದುರಿಸೋಕೆ ಆಗಲಿಲ್ಲ ಸಾರ್,

ನನ್ನ ಕೈಲಿ. ಆಗಲೇ ತೀರ್ಮಾನ ಮಾಡಿದೆ—ನನ್ನ ವಿದ್ಯಾರ್ಜನೆ ಆದ ಮೇಲೆ ನನ್ನ ಬಾಳು ಹಳ್ಳಿಗೇ ಮುಡಿಪು, ಎಂತ. ಆದ್ದರಿಂದ ಆ ತೀರ್ಮಾನದ ಪ್ರಕಾರ ನಡೀಬೇಕಾದ್ದು ನನ್ನ ಕರ್ತವ್ಯ ಎಂದುಕೊಂಡಿದೇನೆ' ಎಂದ.

ಗುರುಗಳ ಕಣ್ಣಲ್ಲಿ ಹಸಿಯೊಡೆದಿತ್ತು ಅರೆಕ್ಷಣ ಮೌನ. ಆಮೇಲೆ ಗುರುಗಳೇ ಮಾತಾಡಿದರು.

'ಚಂದ್ರಶೇಖರ.'

'ಸಾರ್.'

'ನೀನು ನಿಜವಾಗಿಯೂ ನನ್ನ ನಚ್ಚಿನ ಶಿಷ್ಯ. ನಿನ್ನಂಥ ಶಿಷ್ಯ ಇದ್ದದ್ದಕ್ಕಾಗಿ ನನಗೊಂದು ಹೆಮ್ಮೆ. ಆದ್ದರಿಂದ ತುಂಬು ಮನಸಿನಿಂದ ಹರಸುತೇನೆ, ಒಳ್ಳೇದಾಗಲಿ ಎಂತ. ಹಳ್ಳಿಯಲ್ಲಿ ಏನಾಗಬೇಕು? ಏನಿಲ್ಲ? ಏನಿದೆ?—ಇದನ್ನೆಲ್ಲಾ ನಾನೇನು ನಿನಗೆ ಹೇಳಬೇಕಾದ್ದಿಲ್ಲ. ಅರ್ಥ ಶಾಸ್ತ್ರದ ವಿದ್ಯಾರ್ಥಿಯಾದ್ದರಿಂದ ಅದೆಲ್ಲಾ ನಿನಗೇ ಗೊತ್ತು. ಆದರೆ ನಿನಗೆ ಯಾವಾಗ ಏನು ಸಹಾಯ ಬೇಕಾದರೂ ಕೇಳು, ನನ್ನ ಕೈಯಲ್ಲಾಗುವುದಾದರೆ ಅಗತ್ಯವಾಗಿ ಒದಗಿಸುತ್ತೇನೆ. ನಿನ್ನ ಆಸೆ ಕೈಗೂಡಲಿ. ಹೋಗಿ ಬಾ.'

'ಆಗಲಿ, ಸಾರ್. ನಿಮ್ಮ ಆಶೀರ್ವಾದ ಮುಖ್ಯ' ಎಂದ ಚಂದ್ರಶೇಖರ. ಅವನ ಕಣ್ಣಲ್ಲೂ ನೀರು ಬಂದಿತ್ತು. ಯಾಕೋ ಏನೋ, ಶಕುಂತಲೆ ಗಂಡನೂರಿಗೆ ಪ್ರಯಾಣ ಮಾಡುವಾಗಿನ ದೃಶ್ಯ ಅವನ ಮನಸಿನ ತೆರೆಯ ಮೇಲೆ ಮೂಡಿತು........

ಇದನ್ನೆಲ್ಲಾ ನೆನಸಿಕೊಳ್ಳುತ್ತಿದ್ದಾಗ ಬಸ್ಸು 'ಗರ್, ಗರ್, ಗರಕ್' ಎಂದು ಶಬ್ದ ಮಾಡುತ್ತಾ ಹಿಂದಕ್ಕೂ ಮುಂದಕ್ಕೂ ಒಂದೆರಡು ಸಲ ಜಗ್ಗಾಡಿ ಧಡಕ್ಕನೆ ನಿಂತಿತು. ಕಂಡಕ್ಟರು ಬಸ್ಸಿನ ಮೂತಿಯ ಮೇಲಿಂದ ಕೆಳಕ್ಕೆ ಕುಪ್ಪಳಿಸಿದ. ಡ್ರೈವರೂ ಕೆಳಕ್ಕಿಳಿದು, 'ಸ್ಪಾನರ್ ತಕೋ, ದಸ್ತಗೀರ್' ಎಂದ.

ಬಸ್ಸು ರಿಪೇರಿಯಾಗಿ ಹೊರಡುವಾಗ ಸಂಜೆ ಜಾರಿ ಕತ್ತಲೆ ಆವರಿಸಿತ್ತು. ಬಸ್ಸಿನ ಧಡಕಲು ಶಬ್ದ ಬಿಟ್ಟು ಬೇರಾವ ಶಬ್ದವೂ ಇಲ್ಲ. ಬಸ್ಸಿ

ನಲ್ಲಿ ಕುಳಿತಿದ್ದವರೆಲ್ಲ ಆಕಳಿಸಿ ಆಕಳಿಸಿ ಸುಸ್ತಾಗಿ ತೂಕಡಿಸುತ್ತಾ ಇದ್ದರು. ಅಂತೂ ರಾತ್ರಿ ಎಂಟರ ವೇಳೆಗೆ ಮಾಯಂದ ಹಳ್ಳಿಯ ಕಾಲು ದಾರಿಯ ಬಳಿ ಬಸ್ಸು ನಿಂತಿತು ಬಸ್ಸು ದೂರದಲ್ಲಿ ಕಂಡಾಗಲೇ ಚಂದ್ರಶೇಖರನ ಗಾಡಿಯಾಳು ಸಿಂಗ ಕೈಬೀಸಿ ಬಸ್ಸು ನಿಲ್ಲಲು ಸಂಜ್ಞೆಮಾಡುತ್ತಿದ್ದ ಇದನ್ನು ಕಂಡು ರೈಲು ನಿಲ್ದಾಣದ ಹೊರವಲಯದಲ್ಲಿ ರೈಲಿಗೆ ಸ್ವಾಗತ ಬಯಸುವ ಕೈಮರದ ನೆನಪು ಬಂತು ಚಂದ್ರಶೇಖರನಿಗೆ. ಬಸ್ಸು ತುಂಬ ಹತ್ತಿರಕ್ಕೆ ಬಂದಾಗ, 'ಮಾಯಂದ ಹಳ್ಳಿಗೆ ಮೈಲಿಗಳು ೧||' ಎಂದು ಬರೆದಿದ್ದ ಕೈಮರ ಬಸ್ಸಿನ ಹಣೆಬೆಳಕಿನಲ್ಲಿ ನಿಚ್ಚಳವಾಗಿ ಕಾಣಿಸುತ್ತಿತ್ತು ಕಂಡಕ್ಟರು, 'ಮಾಯಂದಹಳ್ಳಿ. ಇಳೀರಿ ಸಾರ್' ಎಂದು ಹೇಳಿ ಬಸ್ಸಿನ ತಲೆಯ ಮೇಲೆ ಹತ್ತಿ ಚಂದ್ರಶೇಖರನ ಸಾಮಾನು ಇಳಿಸಿದ ಎಲ್ಲಾ ಇಳಿಸಿಯಾದ ಮೇಲೆ ಬಸ್ಸು ದಿಗ್ವಿಜಯದ ಹೆಮ್ಮೆಯಿಂದ ಬೀಗುತ್ತಾ ಮುಂದೆ ನಡೆಯಿತು

ಮಾಯಂದ ಹಳ್ಳಿಯತ್ತ ಹೋಗುವ ಕವಲು ದಾರಿಯ ಎರಡು ಬದಿಯಲ್ಲೂ ಎರಡು ಕಂಬಗಳು ನಿಂತಿದ್ದವು. ಅವು ಬರೀ ಪೊಳ್ಳು. ಆದರೂ ಹೊರ ನೋಟಕ್ಕೆ ಬಲು ಚೆಂದ, ಕಟ್ಟಿಸಿದಾಗ ಚಂದ್ರಶೇಖರ ನೋಡಿದಾಗ ಗಾರೆಯೆಲ್ಲ ಕಿತ್ತುಹೋಗಿತ್ತು ಒಂದು ಕಂಬದ ಮಣ್ಣಿನ ಶಿರ ಮುರಿದು ಒಂದು ಕಡೆಗೆ ವಾಲಿತ್ತು ಆ ಮಾರ್ಗವಾಗಿ ತಿರುಗುವ ಗಾಡಿಗಳ ಪಕ್ಕ ತಾಕಿ ಕಂಬದ ನಡುಭಾಗ ಇಡಿದುಹೋಗಿತ್ತು. ಈ ಕಂಬಗಳೂ ನಮ್ಮ ಹಳ್ಳಿಯ ಹಾಗೆಯೇ ಇವೆ ಎಂದುಕೊಂಡ, ಚಂದ್ರಶೇಖರ. ಅಷ್ಟರಲ್ಲಿ ಸಿಂಗ ಇವನ ಸಮಾಧಿ ಭಂಗ ಮಾಡಿದ.

'ಬಸ್ಸು ಯಾಕೆ ಈಸೊಂದು ತಡ ಚಂದ್ರಪ್ಪ?' ಎಂದ

'ನಡುವೆ ಕೆಟ್ಟುಹೋಗಿತ್ತು ಸಿಂಗ ಚೆಂದಾಗಿದೀಯ? ಮನೇಲೆಲ್ಲಾರೂ ಚೆಂದಾಗಿದಾರೇನೊ?' ಎನ್ನುತ್ತಾ ಚಂದ್ರಶೇಖರ ಗಾಡಿಯೊಳಗೆ ಕೂತ ಈ ವೇಳೆಗಾಗಲೇ ಸಿಂಗ ಸಾಮಾನೆಲ್ಲವನ್ನೂ ಗಾಡಿಗೆ ತುಂಬಿದ್ದ

'ಹೂ, ಚಂದ್ರಪ್ಪ' ಎನ್ನುತ್ತಾ ಸಿಂಗ ಗಾಡಿಯ ಎತ್ತುಗಳ ಸೂತ್ರ ಹಿಡಿದು ಜಗ್ಗಿದ. ಎತ್ತುಗಳು ಗೆಲವಿನಿಂದ ಗಾಡಿ ಎಳೆದುಕೊಂಡು ನಡೆದವು

ಸಿಂಗನೊಡನೆ ಮಾತಾಡಿದಾಗ ಚಂದ್ರಶೇಖರನ ಮನಸ್ಸು ಸಹಜವಾಗಿ ತಮ್ಮ ಮನೆಯ ಕಡೆ ಹರಿಯಿತು. ತಾಯಿತಂದೆ ತಂಗಿಯರ ಮುಖ ಮುಂದೆ ಬಂದವು ಇದುವರೆಗೂ ತಡೆದು ನಿಲ್ಲಿಸಿದ್ದ ಉದ್ವೇಗ ಉಕ್ಕಿ ಬಂತು. ಎಷ್ಟು ಹೊತ್ತಿಗೆ ಮನೆ ಸೇರಿಯೇನು ಯಾವಾಗ ಅವರನ್ನು ಮಾತಾಡಿಸಿಯೇನು? ಎಂದು ತವಕಗೊಂಡ ಅಂತೆಯೇ ಸಹಜವಾಗಿ ಅವನ ಮನಸ್ಸು ಇನ್ನೊಂದು ವ್ಯಕ್ತಿಯ ಕಡೆ ಹರಿಯಿತು. ಚೆನ್ನಿಯನ್ನು ನೆನಸಿಕೊಂಡಾಗ ಅವನ ಎದೆಯೇಕೋ ಬೆಳದಿಂಗಳಲ್ಲಿ ಕಡಲು ಉಕ್ಕುವಂತೆ ಉಬ್ಬಿತು. ಇನ್ನು ಅವಳಣ್ಣ ಚಿನ್ನಯ್ಯ ಮೊದಲಿನ ಹಾಗೆಯೇ ಹಟವಾದಿಯಾಗಿದಾನೋ ಇಲ್ಲ ತಿದ್ದಿಕೊಂಡಿದಾನೋ ಎಂಬ ವಿಚಾರವೂ ಅವನ ಮನಸಿಗೆ ಬರದೆ ಇರಲಿಲ್ಲ

'ಸಿಂಗಾ, ಗಂಗವ್ವ ಮನೇಗೆ ಬಂದಿದಾಳೇನೋ?'

'ಊ ಇವತ್ತು ಸಂಜೆನಾಗ ಬಂದ್ರು.'

ಗಂಗವ್ವ ಚಂದ್ರಶೇಖರನ ತಂಗಿ ಮದುವೆಯಾಗಿ ಅದೇ ಊರಿನಲ್ಲಿ ಗಂಡನ ಮನೆಯಲ್ಲಿದ್ದಳು.

'ಚಿನ್ನಯ್ಯಾವರ ಮನೇಲಿ ಎಲ್ಲಾರೂ ಚೆಂದಾಗಿದಾರಾ?'

'ಊ. ಅವ್ರೆ. ಆದ್ರೆ ಚಿನ್ನಯ್ಯಾ ಮಾತ್ರ ನಮ್ಮನ್ನ ಕಂಡ್ರೆ ಒಸಿ ಅಂಗಂಗೇನೆ.'

ಇಂತೆಯೇ ಇವರ ಸಂಭಾಷಣೆ ಒಹು ದೂರ ನಡೆಯಿತು. ಚಂದ್ರಶೇಖರ ಕೇಳಿದ ಪ್ರಶ್ನೆಗೆಲ್ಲ ಸಿಂಗ ಆದಷ್ಟು ಸಂಕ್ಷೇಪವಾಗಿ ಉತ್ತರ ಕೊಡುತ್ತಿದ್ದ. ಕೊನೆಗೆ ಬೇರಾವ ಪ್ರಶ್ನೆಯೂ ಇರಲಿಲ್ಲವಾದ್ದರಿಂದ ಚಂದ್ರಶೇಖರ ಮೌನ ತಾಳಬೇಕಾಯಿತು.

ಊರ ಹಾದಿ ಒಂದು ಕೆರೆಯ ಏರಿಯ ಮೇಲೆ ಬಳಸಿಹೋಗುತ್ತಿತ್ತು ವಿಶಾಲವಾದ ಕೆರೆಯಂಗಳ. ಆದರೆ ಆಗ ಅದೆಲ್ಲ ಹೂತು ಹೋಗಿ ಹೆಚ್ಚು ನೀರು ನಿಲ್ಲುತ್ತಿರಲಿಲ್ಲ. ಆಗ ಅದು ಬರೀ ಜೊಂಡಿಗೆ ಆಶ್ರಯವಾಗಿತ್ತು ಕಪ್ಪೆಗಳು ಸಹಸ್ರಕಂಠದಲ್ಲಿ ಮುಗಿಲು ಹರಿಯುವ ಸಾಹಸ ನಡಸಿದ್ದವು ಮಿಣುಕುಹುಳುಗಳು ಮಿಣಕ್ ಮಿಣಕ್ ಎಂದು ಹಾರುತ್ತಾ ತಮ್ಮ ಬೆಳಕಿನಿಂದ ಕಪ್ಪುಗತ್ತಲೆಯನ್ನು ಇನ್ನೂ ಕಪ್ಪಾಗಿ ತಿದ್ದುತ್ತಿದ್ದವು. ' ಸೊಳ್ಳೆಗಳ

ಕಾಟವಂತೂ ಹೇಳಿತೀರದು. ನಮ್ಮ ಮುಂದಿನ ಶತ್ರು ಇವನು ಎಂಬ ರೋಷದಿಂದಲೋ ಏನೊ, ಅವ್ಯಾಹತವಾಗಿ ಚಂದ್ರಶೇಖರನ ಮೇಲೆ ದಾಳಿ ನಡೆಸಿದ್ದವು. ಎಂಥ ಕೆರೆ! ಆಗಾಗ ಇವರ ತಳ ಶೋಧಿಸುತ್ತಾ ಇದ್ದಿದ್ದರೆ ಇದರಲ್ಲಿ ಎಷ್ಟೊಂದು ನೀರಿರುತ್ತಾ ಇತ್ತು. ಈಗ ಬರೀ ಜೊಂಡಿನ ನೆಲೆ, ಸೊಳ್ಳೆಯ ಸ್ವರ್ಗ, ಎಂದುಕೊಂಡ ಚಂದ್ರಶೇಖರ ಅವನ ಎಡಬದಿಗೆ—ಕೆರೆಯ ಪಕ್ಕಕ್ಕೆ—ನೋಟ ತಿರುಗಿಸಿದ. ಕೆಳಗಡೆ ಹೊಲ ಕಂಡೂ ಕಾಣವಂತೆ ಮೌನವಾಗಿ ಮಲಗಿತ್ತು. ಈ ಕೆರೆಯಲ್ಲಿ ನೀರಿದ್ದಿದ್ದರೆ ಇದೆಲ್ಲ ನಗುವ ನಂದನವನವಾಗುತ್ತಿತ್ತಲ್ಲವೆ? ಇದಕ್ಕೆಲ್ಲ ಯಾರದು ತಪ್ಪು? ಎಂದುಕೊಂಡ ಈ ಪ್ರಶ್ನೆಗೆ ಉತ್ತರ ಬರಲಿಲ್ಲ. ನಿಟ್ಟುಸಿರು ಬಂತು.

ಗಾಡಿ ಊರಬಾಗಿಲು ಸೇರಿದಾಗ ಸುತ್ತಣ ತಿಪ್ಪೆಯ ರಾಶಿಯ ನಾತ ಮೂಗು ಒಡೆಯುತ್ತಿತ್ತು ಸೊಳ್ಳೆಯ ಗುಂಪಿನ ಜತೆಗೆ ನೊಣದ ದಾಳಿ ಬೇರೆ. ಇದರಿಂದ ಊರು ಬಂತೆಂದು ಗುರುತಿಸಲು ಚಂದ್ರಶೇಖರ ನಿಗೆ ಕಷ್ಟವಾಗಲಿಲ್ಲ. ಆ ವೇಳೆಗೆ ಎತ್ತುಗಳ ಕತ್ತಿನ ಕಿರುಗಂಟೆಯ ಶಬ್ದ ಕೇಳಿ ಒಂದೆರಡು ನಾಯಿ ಬಗುಳಲಾರಂಭಿಸಿದ್ದವು. 'ಊರಾಗಲೇ ಸಿಕ್ಕಿತೇ ಸಿಂಗ?' ಎಂದ, ಚಂದ್ರಶೇಖರ.

'ಓಹೊ! ಒಳ್ಳೇ ಪಸಂದಾದ ಹೋರಿಗಳು. ಕಳೆದ ಹಾಸನದ ಜಾತ್ರೇಲಿ ಖಾಯಿಸ್ಸಾಗಿ ತಕೊಂಡದ್ದು ಈ ಜತೇನ. ಒಡೇರಿಗೆ ಈ ಎತ್ತು ಎಂದರೆ ಪಿರಾಣ.' ಎಂದ ಸಿಂಗ.

'ಓ!' ಎಂದು ಚಂದ್ರಶೇಖರ ತಲೆದೂಗುವ ವೇಳೆಗೆ ಗಾಡಿ ಅವರ ಮನೆಯ ಮುಂದೆ ನಿಂತಿತು.

೨

ಮಾಯಂದ ಹಳ್ಳಿಯ ಪಟೇಲ್ ಸುಬ್ಬಯ್ಯಗೌಡರು ಪಟೇಲರಲ್ಲ ದಿದ್ದರೂ ಅವರನ್ನು ಪಟೇಲರೆಂದೇ ಹಳ್ಳಿಯ ಜನ ಸಂಬೋಧಿಸುತ್ತಿದ್ದರು. ಅವರು ಪಟೇಲರೇನೋ ಆಗಿದ್ದರು, ಒಮ್ಮೆ. ಆದರೆ ಈಗ ಅವರ ಸೋದರಳಿಯ ಚಿನ್ನಯ್ಯನೇ ಪಟೇಲ. ಪಟೇಲಿಕೆ ವಂಶ

ಪಾರಂಪರ್ಯವಾಗಿ ಅವನಿಗೆ ಬಂದ ಹಕ್ಕು. ತಂದೆ ಸತ್ತಾಗ ಚಿನ್ನಯ್ಯನಿಗೆ ಇನ್ನೂ ಎಳ ವಯಸ್ಸು, ಎಂಟು ವರ್ಷದ ಚಿನ್ನಯ್ಯ ಅವನ ತಂಗಿ ಚಿನ್ನಿ, ತಾಯಿ ಲಕ್ಷ್ಮವ್ವ ಇವರಲ್ಲದೆ ಬೇರೆ ಯಾರೂ ಇರಲಿಲ್ಲ. ಅವನ ಆಸ್ತಿ-ಪಾಸ್ತಿ ಮನೆವಾರ್ತೆ ಎಲ್ಲದರ ಜವಾಬುದಾರಿಯನ್ನೂ ಲಕ್ಕವ್ವನ ಅಣ್ಣ ಸುಬ್ಬಯ್ಯ ಗೌಡರೇ ಹೊರಬೇಕಾಗಿ ಬಂತು. ಆದ್ದರಿಂದ ಪಟೇಲಿಕೆಯೂ ಅವರ ಪಾಲಿಗೇ ಬಂತು. ಚಿನ್ನಯ್ಯ ವಯಸ್ಸಿಗೆ ಬಂದು ತನ್ನ ಮನೆಯ ಯಜಮಾನಿಕೆ ವಹಿಸಿದಾಗ ಅವನೇ ಪಟೇಲನೂ ಆದ

ಆದರೆ ಊರಿನ ಜನ ಈ ವ್ಯತ್ಯಾಸವನ್ನು ಅಷ್ಟಾಗಿ ಗುರುತಿಸಿರಲಿಲ್ಲ. ಕಂದಾಯ ವಸೂಲಿ ಮುಂತಾದ ಪಟೇಲಿಕೆಯ ಕೆಲಸಕಾರ್ಯಗಳನ್ನೆಲ್ಲ ಚಿನ್ನಯ್ಯನೇ ನಿರ್ವಹಿಸುತ್ತಿದ್ದನಾದರೂ ಊರ ಮುಖಂಡನೆಂದು ಜನ ಅವನನ್ನು ಕಾಣುತ್ತಿರಲಿಲ್ಲ. ಈ ದೃಷ್ಟಿಯಲ್ಲಿ ಸುಬ್ಬಯ್ಯಗೌಡರೇ ಅವರ ಮುಖಂಡರು. ಪಟೇಲಿಕೆಯ ಹಕ್ಕು ಬಾಧ್ಯತೆಯ ಪ್ರಶ್ನೆಯಲ್ಲ, ಜನರಿಗೆ ಬೇಕಾಗಿದ್ದದ್ದು—ತಮ್ಮ ಒಲವಿಗೆ ತಕ್ಕ ಸೌಜನ್ಯ, ಗೌರವ. ಈ ಗುಣಗಳು ಸುಬ್ಬಯ್ಯಗೌಡರಲ್ಲಿ ಮನೆ ಮಾಡಿಕೊಂಡಿದ್ದವು. ಪಟೇಲಿಕೆ ಅವರ ಕೈಯಲ್ಲಿದ್ದ ಹತ್ತು ವರ್ಷದಲ್ಲಿ ಒಮ್ಮೆಯಾದರೂ ದುಡುಕಿ ಅವರು ಕುಳಗಳನ್ನು ಅಗೌರವವಾಗಿ ಕಂಡಿರಲಿಲ್ಲ. ಅವರೆಲ್ಲ ತಮ್ಮಂದಿರು, ತಾವು ಅವರ ಹಿರಿಯಣ್ಣ ಎಂಬ ಘುಮತೆ ಅವರಿಗೆ. ಕಂದಾಯ ವಸೂಲು ಮಾಡಬೇಕಾದರೂ ಅಷ್ಟೆ,—'ಇಕೋ, ನೋಡಪ್ಪ. ನಿಂದು ಬಾಕಿ ಇಷ್ಟಿದೆ. ನಿಂಗೆ ಕೊಡೋಕಾಗದೆ ಇದ್ದರೆ ನಿನ್ನ ತಾಪತ್ರಯಾನಾದರೂ ಏನದೆ ಹೇಳು' ಎನ್ನುತ್ತಿದ್ದರು. ರೈತ ಸಾಧ್ಯವಿದ್ದರೆ ಕೂಡಲೇ ಕಂದಾಯ ಕೊಡುತ್ತಿದ್ದ. ಇಲ್ಲದಿದ್ದರೆ ತನ್ನ ಕಷ್ಟದ ಕಾರಣ ತಿಳಿಸುತ್ತಿದ್ದ.

ಆದರೆ ಸುಬ್ಬಯ್ಯಗೌಡರು ಒಳ್ಳೆಯ ಮಾತಿನಲ್ಲಿ ಕಂದಾಯ ವಸೂಲು ಮಾಡಿ ಸರ್ಕಾರದ ಟಂಕಸಾಲೆ ತುಂಬುತ್ತಿದ್ದರೆಂದಲ್ಲ. ಎಷ್ಟೋ ಸಮಯದಲ್ಲಿ ಗ್ರಾಮಸ್ಥರ ಪರವಾಗಿ ಸರ್ಕಾರಿ ಅಧಿಕಾರಿಗಳೊಡನೆ ವ್ಯಾಜ್ಯ ಹೂಡಿದ್ದೂ ಉಂಟು. ಎಷ್ಟೋ ಸಲ ತುತ್ತುಕಟ್ಟಿಗೆ ಬಂದಾಗ ರೈತರ ಮಾನ ಕಾಪಾಡಲು ತಾವೇ ಬಾಕಿ ತೆತ್ತು 'ನಿಂಗೆ ಅನುಕೂಲ ಆದಾಗ ಕೊಡಪ್ಪ' ಎಂದು ಅವರಿಗೆ ಹೇಳಿದ್ದೂ ಉಂಟು. ಮೇಲಧಿಕಾರಿಗಳು

ಜಮಾಬಂದಿಗೆ ಬಂದಾಗ ಅವರೇನಾದರೂ ರೈತರೊಡನೆ ಅಗೌರವವಾಗಿ ವರ್ತಿಸಿದರೆ, 'ಸ್ವಾಮಿ, ನಾನು ಈ ಊರಿನ ಪಟೇಲ ಏನು ಕೊರತೆ ಇದ್ದರೂ ನನಗೆ ಅಪ್ಪಣೆ ಆಗಬೇಕು' ಎಂದು ಖಡಾಖಂಡಿತವಾಗಿ ಹೇಳು ತ್ತಿದ್ದರು ಇದರಿಂದ ಗ್ರಾಮಸ್ಥರಿಗೆ ಇವರಲ್ಲಿ ಪ್ರೀತಿ ಗೌರವ ಅಗಾಧವಾಗಿ ಹೆಚ್ಚಿದ್ದವು

ಊರಿನ ನ್ಯಾಯ ತೀರ್ಮಾನದ ವಿಚಾರದಲ್ಲೂ ಅಷ್ಟೆ. ಏನು ವ್ಯಾಜ್ಯವಾದರೂ ಪಂಚಾಯಿತರ ಸಮಕ್ಷಕ್ಕೆ ಬರಬೇಕು. ಸುಬ್ಬಯ್ಯ ಗೌಡರೇ ಅಧ್ಯಕ್ಷರು ಅವರಾಗಿ ಬಯಸಿದ್ದಲ್ಲ ಹಿರಿಯರು ತಾವಾಗಿ ಬಲವಂತದಿಂದ ಒಪ್ಪಿಸಿದ್ದು. 'ಕೋರ್ಟು ಕಚೇರಿ ಹತ್ತಿ ಯಾಕೆ ಹಾಳಾಗ ಬೇಕು? ಕೇಳಿಲ್ವ, ಗಾದೆ?—ಕೋರ್ಟು ವ್ಯಾಜ್ಯದಲ್ಲಿ ಗೆದ್ದವನು ಸೋತ, ಸೋತವನು ಸತ್ತ, ಎಂತ. ನಮ್ಮೂರೇ ಒಂದು ಪುಟ್ಟ ರಾಜ್ಯ ಸರ್ಕಾರಕ್ಕೆ ಕೊಡೋ ಕಂದಾಯ ಕೊಟ್ಟರೆ ಆಯಿತು ಅವರು ಮಾಡೋ ಬಂದೋಬಸ್ತು, ಮರಾಮತ್ತು ಎಲ್ಲಾ ಮಾಡಲಿ ಆದರೆ ನಮ್ಮನ್ನ ನಾವೇ ಆಳಿಕೊಳ್ಳೋದು ಕಲೀಬೇಕು ಈ ಪಂಚಾಯ್ತೀನೇ ನಮ್ಮ ಪ್ರೀವೀ ಕೌನ್ಸಿಲ್ ಆಗಬೇಕು' ಎನ್ನುತ್ತಾ ಇದ್ದರು. ಜನ ಹಾಗೆಯೇ ನಡೆದುಕೊಳ್ಳುತ್ತಾ ಇದ್ದರು

ಚಿನ್ನಯ್ಯ ಸರಿವಯಸ್ಸಿಗೆ ಬರುವ ವೇಳೆಗೆ ಸುಬ್ಬಯ್ಯಗೌಡರಿಗೆ ಆಗದ ಕೆಲವರು ಅವನ ಹಿತ್ತಾಳೆ ಕಿವಿಗೆ ಏನೇನೋ ಊದಿದ್ದರು. 'ನೋಡೋ, ಚಿಪ್ಪೆ ನೀನು ಹೀಗೆ ತೂಕಡಿಸ್ತಾ ಕೂತಿರು ನಿಮ್ಮ ಸೋದರಮಾವ ನಿನ್ನ ಆಸ್ತೀನೆಲ್ಲಾ ರೂಡಿಸಿಕೊಂಡು ವಕದಸ್ತಾಗಿ ಪಂಗ ನಾಮ ಹಾಕ್ತಾನೆ' ಎಂತ ಏನೋ ಕನಿಕರ ಪಟ್ಟವರ ಹಾಗೆ ಹೇಳುತಾ ಇದ್ದರು ಇದರಿಂದ ಚಿನ್ನಯ್ಯ ಯಾವಾಗ ನನಗೆ ವಯಸ್ಸು ತುಂಬೀತು, ಯಾವಾಗ ನನ್ನ ಹೊಲ, ಮನೆ, ಪಟೇಲಿಕೆ ಎಲ್ಲವನ್ನೂ ಅವರಿಂದ ಕಿತ್ತು ಕೊಂಡೇನು, ಎಂದು ತವಕಪಡುತ್ತಿದ್ದ ಸುಬ್ಬಯ್ಯಗೌಡರೇನಾದರೂ ಇವನ್ನೆಲ್ಲ ವಹಿಸಿಕೊಡುವುದಕ್ಕೆ ಸತಾಯಿಸಿದರೆ ಆ ಸಮಯದಲ್ಲಿ ಏನು ಮಾಡಬೇಕೆಂಬು ಒಂದೆರಡು ಸಾರಿ ನೀಲಾಂಬರದವರೆಗೂ ಯಾತ್ರೆ ಹೋಗಿ

ಲಾಯರನ್ನು ಕಂಡು ಬಂದಿದ್ದ. ಇದೆಲ್ಲ ಸುಬ್ಬಯ್ಯಗೌಡರಿಗೆ ಗೊತ್ತಿಲ್ಲದೆ ಇರಲಿಲ್ಲ ಆದರೆ ಅವರು ಕನಿಕರದಿಂದ ನಕ್ಕು ಸುಮ್ಮನಾಗಿದ್ದರು

ಕೊನೆಗೆ ಒಂದು ದಿನ ಸುಬ್ಬಯ್ಯಗೌಡರಿಗೆ ಒಂದು ರಿಜಿಸ್ಟರಾದ ಕಾಗದ ಟಪಾಲಿನಲ್ಲಿ ಬಂತು. ಒಡೆದು ನೋಡಿದರೆ ಚಿನ್ನಯ್ಯನ ಲಾಯರ ನೋಟೀಸು: 'ನಮ್ಮ ಕಕ್ಷಿಗಾರ ಚಿನ್ನಯ್ಯ ವಯಸ್ಸಿಗೆ ಬಂದಿದಾರೆ. ಆದರೂ ನೀವು ಅವರ ಆಸ್ತಿಪಾಸ್ತಿ ಪಟೇಲಿಕೆ ಮುಂತಾದ ಸಮಸ್ತ ಹಕ್ಕು ಗಳನ್ನೂ ಅವರಿಗೆ ಬಿಟ್ಟುಕೊಟ್ಟಿಲ್ಲ. ಈ ನೋಟೀಸ್ ಕಂಡ ಹದಿನೈದು ದಿನಗಳ ಒಳಗಾಗಿ ಇವನ್ನೆಲ್ಲ ಸಾಕ್ಷಿಗಳ ರೂಬುರೂಬು ಅವರಿಗೆ ವಹಿಸಿ ಕೊಟ್ಟು ಪತ್ರ ರಿಜಿಸ್ಟರು ಮಾಡಿಸದೇ ಇದ್ದರೆ ಮುಂದೆ ದಾವ ಹೂಡ ಲಾಗುತ್ತೆ' ಎಂತ! ಸುಬ್ಬಯ್ಯಗೌಡರಿಗೆ ದುಃಖ, ಕನಿಕರ, ಅಸಮಾಧಾನ ಒಮ್ಮೆಲೇ ಒತ್ತರಿಸಿ ಬಂದವು. 'ಅಯ್ಯೋ ಮುಕ್ಕ! ಇದಕ್ಯಾಕೆ ಇಷ್ಟೊಂದು ರಂಪ? ನಾನೇನು ಕೊಡೋಲ್ಲ ಎಂದೆನೆ? ಅದೇ ಯೋಚನೆ ಮಾಡ್ತಾ ಇದ್ದೆ ಅಥವಾ ನೀನು ಒಂದು ಮಾತು ಕೇಳಿದ್ದರೂ ಆಗುತಾ ಇತ್ತು' ಎಂದುಕೊಂಡರು. ಕೂಡಲೇ ತಮ್ಮ ತಂಗಿಯ ಬಳಿಗೆ ಬಂದು ಎಲ್ಲಾ ವಿಚಾರವನ್ನೂ ತಿಳಿಸಿದರು.

ಚಿನ್ನಯ್ಯನ ತಾಯಿಗೆ ಮಗನ ಅಸಮಾಧಾನಕರವಾದ ನಡತೆ ಗೊತ್ತಿಲ್ಲದೆ ಇರಲಿಲ್ಲ, ಎಷ್ಟೋ ಸಲ ಮಗನನ್ನು ಕೂರಿಸಿಕೊಂಡು, 'ಮಾವಯ್ಯನ ಮೇಲೆ ಹೀಗೆಲ್ಲ ವಿರೋಧ ಕಟ್ಟಬಾರದು, ಚಿನ್ನ. ಅವನೇ ನಿನ್ನನ್ನು ಕಷ್ಟಕಾಲದಲ್ಲಿ ಸಾಕಿ ಸಲಹಿ ಮುಂದಕ್ಕೆ ತಂದದ್ದು ಅವನು ನಿನಗೇನು ಮಾಡಿದ, ಹೀಗೆ ವಿಷ ಕಾರೋಕೆ?' ಎಂದು ಬೋಧಿಸಿದ್ದಳು. ಆದರೆ ಅದಕ್ಕೆ ಯಾವಾಗಲೂ ಚಿನ್ನಯ್ಯನದು ಒಂದೇ ಉತ್ತರ,—

'ಯಾರ ಉಪಕಾರಕ್ಕೆ ಮಾಡಿದನವ್ವ? ನಂ ಆಸ್ತಿ ಇರಲಿಲ್ವಾ? ಅದರಿಂದ ಅವಂಗೆಷ್ಟು ಉಪಕಾರ ಆಗೈತೆ, ಬಲ್ಯಾ? ಪಟೇಲಿಕೆ ಜಬರ್ದಸ್ತು ಮಾಡೋದು ಯಾರಪ್ಪನ್ ಮನೇ ಗಂಟು? ನೀನು ಅಣ್ಣ ಅಂತ ಅವನ ವಶೀಲಿ ಮಾತಾಡಬೇಡ. ಅವನಿಂದ ನಮಗೇನಾಗಬೇಕು? ನಮ್ಮ ಚಿನ್ನೀನ ಅವನ ಮಗಂಗೇನೂ ತಂದ್ಕೋಬೇಡ. ಅವನಪ್ಪನಂತಾ

ಗಂಡುಗಳೈತೆ, ಪಟ್ಟಣದಾಗೆ ದಮ್ಮಯ್ಯ ಅಂತ ಕಾಲಿಗೆ ಮುಗಿದು ತಂದುಕೊಂಡಾರು.

'ಹೋಗ್ಲೀ, ಬಿಡೋ, ನಿಂದು ಒಂದೇ ಹಟ, ಉಂಡಮನೇಗೆ ಎರಡು ಬಗೆಯೋ ಬುದ್ಧೀಗೆ ದೇವರು ಒಳ್ಳೇದು ಮಾಡೋಕಿಲ್ಲ' ಎಂದು ಕಣ್ಣೀರ ನ್ನೊರಸಿಕೊಳ್ಳುತ್ತಿದ್ದಳು, ಲಕ್ಕವ್ವ.

ಅವನ ಆಸ್ತಿ ಅವನಿಗೆ ವಹಿಸಿಕೊಡುವಾಗ ಚಿನ್ನಯ್ಯ ಮಾಡಿದ ತಕರಾರು ಸುಬ್ಬಯ್ಯಗೌಡರ ಶತ್ರುಗಳಿಗೂ ಬೇಡ ಇದು ಇತ್ತು, ಅದು ಇತ್ತು, ಅದು ಯಾಕೆ ಹೀಗೆ? ಇದು ಯಾಕೆ ಹಾಗೆ?—ಎಂಬುದಾಗಿ ಒಂದೊಂದಕ್ಕೂ ಪಂಚಾಯತಿ ಹೂಡುತ್ತಿದ್ದ. ಸುಬ್ಬಯ್ಯಗೌಡರಿಗೆ ತಮ್ಮ ಮನೆತನದ ವಾರ್ತೆ ಬಯಲಿಗೆ ಬಂದು ನಗೆಪಾಟಲಾಗಬಾರದೆಂಬ ಹಂಬಲ. ಆದರೆ ಚಿನ್ನಯ್ಯ ಪ್ರತಿಯೊಂದಕ್ಕೂ ಕೋರ್ಟಿನ ವಿಚಾರ ಎತ್ತುತ್ತಾ ಇದ್ದ. ಅವನ ಹಿತಶತ್ರುಗಳು ಬೇರೆ ಅವನಿಗೆ ಚೆನ್ನಾಗಿ ಕಿವಿಯೂದಿದ್ದರು ಹೀಗಾಗಿ ಸುಬ್ಬಯ್ಯಗೌಡರು ಕೊನೆಗೆ ಬೇಸರದಿಂದ,—

'ನೋಡು ಚಿನ್ನ. ಇದೆಲ್ಲಾ ಚೆಂದಾಗಿಲ್ಲ ನಾನೇನೋ ಕಳ್ತನದ ಅಪರಾಧ ಮಾಡಿಧಂಗೆ ಆಡ್ತಾ ಇದೀಯೆ. ನಿಂಗೆ ಅದೇನೇನು ಬರಬೇಕೋ ಅದೆಲ್ಲಾ ಹೇಳಿಬಿಡು ನಿಮ್ಮವ್ವನೂ ಅವಳೆ. ಅವಳ್ನೂ ಒಂದು ಮಾತು ಕೇಳಿಬಿಡು. ನಾನು ಬೇರೆ ಜವಾಬು ಆಡದೆ ಕೊಟ್ಟುಬಿಡ್ತೇನೆ ಇಂತಾ ಸಣ್ಣ ವಿಚಾರಕ್ಕೆ ನಾವು ನಾವೇ ಬಡಿದಾಡೋದು ಊರಿಗೆ ಒಳ್ಳೇದಲ್ಲ' ಎಂದರು. ಈ ಜಗಳದಿಂದ ಮುಂದೆ ಊರಿಗೇ ಏನೋ ಕಷ್ಟ ಕಾದಿದೆ ಎಂದು ಅವರ ಮನಸ್ಸು ಅಳುಕಿತು. ಊರಿನ ಹಿರಿಯ ಸಂಸಾರ ತಾವೇ ಹೀಗೆ ಒಣವ್ಯಾಜ್ಯಕ್ಕೆ ತುತ್ತಾದರೆ ಉಳಿದವರೂ ಹಾಗೆಯೇ ಆಗುವು ದಿಲ್ಲವೆ? ಎಂದು ಅವರ ಅಭಿಪ್ರಾಯ.

ಕೊನೆಗೆ ಲಕ್ಕವ್ವ ಮಗನಿಗೆ ಚೆನ್ನಾಗಿ ಬೈದು ಹಾಗೂ ಹೀಗೂ ಮಾಡಿ ಒಂದು ತೀರ್ಮಾನ ಮಾಡಿಸಿದಳು. ಮಗನ ಸಣ್ಣತನ ಕಂಡು ಅವಳ ಮನಸ್ಸು ಬಲು ನಾಚಿಕೊಂಡಿತ್ತು.

ಮುಂದೆ ಪತ್ರ ರಿಜಿಸ್ಟರಾಗುವಾಗ, 'ಇಲ್ಲಿ ಬರೆದಿರೋದೆಲ್ಲ ನಿನಗೆ ಬಂದಿದೆಯೇನಯ್ಯ? ನೀನು ಇದಕ್ಕೆ ಒಪ್ಪಿದೀಯೊ?' ಎಂತ ಸಬ್

ರಿಜಿಸ್ಟ್ರಾರರು ಕೇಳಿದಾಗ ಚಿನ್ನಯ್ಯ ಅರ್ಧತೃಪ್ತಿ, ಅರ್ಧ ಅಸಂತೃಪ್ತಿಯಿಂದ ಗಂಟಲಿನಲ್ಲೇ ಮಾತಾಡಿದ. ಸಬ್ ರಿಜಿಸ್ಟ್ರಾರರು, 'ಅದೆಲ್ಲಾ ಆಗೋದಿಲ್ಲ.' ನಿನ್ನ ಆತ್ಮಸಂತೋಷ ಇದೆಯೋ ಇಲ್ಲವೋ ಖಂಡಿತವಾಗಿ ಹೇಳು' ಎಂದರು. ಸುಬ್ಬಯ್ಯಗೌಡರು ತಲೆ ತಗ್ಗಿಸಿ ನಿಂತಿದ್ದರು ತಾಯಿ ಲಕ್ಕವ್ವನೂ ಮುಂದಾಲೋಚನೆಯಿಂದ ಅಲ್ಲಿಗೆ ಬಂದಿದ್ದಳು 'ಚೆನ್ನಾಯಿತು ಮಗ! ನಿಂಗೆ ಯಾರು ಬುದ್ಧಿ ಹೇಳಿದವರು? ಎರಡು ನಾಲಿಗೇನಾ ನಿಂಗೆ?' ಎಂದಳು. ಚಿನ್ನಯ್ಯ ತನ್ನ ಬಲವನ್ನೆಲ್ಲಾ ತಂದುಕೊಂಡು, 'ಒಪ್ಪಿದೇನೆ' ಎಂದ. ಪತ್ರ ದಾಖಲಾಯಿತು

ಚಿನ್ನಯ್ಯ ಪಟೇಲನಾದ ಮೇಲೆ ತನ್ನನ್ನು ಪಟೇಲರು ಎಂದು ಜನ ಸಂಬೋಧಿಸಬೇಕೆಂದು ಏನೇನೋ ಪ್ರಯತ್ನ ಮಾಡಿದ ಎಲ್ಲಾ ವಿಫಲವಾಯಿತು. ಊರಿನ ಶಾನುಭೋಗರು ಕೂಡ ಚಿನ್ನಯ್ಯನನ್ನು ಚಿನ್ನಯ್ಯನೆಂದೇ ಕರೆಯುತ್ತಿದ್ದರು ಸುಬ್ಬಯ್ಯಗೌಡರನ್ನು ಮಾತ್ರ 'ಪಟೇಲರೆ' ಎಂದೇ ಮಾತಾಡಿಸುತ್ತಿದ್ದರು ಸಾಲದ್ದಕ್ಕೆ ಊರ ಮುಖಂಡತ್ವವೂ ಸುಬ್ಬಯ್ಯಗೌಡರಲ್ಲೆ ಇತ್ತು. ಊರ ವಿಚಾರ ಏನಿದ್ದರೂ ಅವರಲ್ಲಿಗೇ ಬರುತ್ತಿತ್ತು. ಚಿನ್ನಯ್ಯನಿಗೆ ಕಂದಾಯ ವಸೂಲಿಯ ಭಾರ ಮಾತ್ರ ಬಿತ್ತು. ಪಟೇಲಿಕೆಯ ಗೌರವ ಬರಲಿಲ್ಲ ಆ ಊರಿನಿಂದ ದೇಶದ ಪ್ರಜಾಪ್ರತಿನಿಧಿ ಸಭೆಯ ಚುನಾವಣೆಯಲ್ಲೂ ಊರಿನ ಜನ ಸುಬ್ಬಯ್ಯಗೌಡರನ್ನೆ ಆರಿಸಿ ಕಳುಹುತ್ತಿದ್ದರು ಈಗ ಅವರ ಮಗ ಚಂದ್ರಶೇಖರ ಕಾಲೇಜು ವ್ಯಾಸಂಗ ಮುಗಿಸಿ ಬರುತ್ತಾ ಇದ್ದ ಇನ್ನು ಅವನಿಗೆಲ್ಲಿ ಸರ್ಕಾರಿ ಹುದ್ದೆ ದೊರೆತು ಅವರ ಉನ್ನತಿ ಶಿಖರಕ್ಕೇರೀತೋ ಎಂಬ ಅಸೂಯೆ ಅವನಲ್ಲಿ ಮೂಡಿತು. ಆದರೆ ಗತ್ಯಂತರವಿಲ್ಲದೆ ಒಳಗೊಳಗೇ ಹಲ್ಲು ಕಡಿಯುತ್ತಿದ್ದ.

ಚಂದ್ರಶೇಖರ ಊರಿಗೆ ಮರಳಿದ ರಾತ್ರಿ ಅವನು ಕೂತಿದ್ದ ಗಾಡಿ ಜಣಕ್ ಜಣಕ್ ಎಂದು ಗಾಳಿಗುದುರೆಯ ಹಾಗೆ ಸುಬ್ಬಯ್ಯಗೌಡರ ಮನೆ ಕಡೆ ಹೋಗುತ್ತಿದ್ದಾಗ ಸದ್ದು ಕೇಳಿ ಹೊರಗೆ ಬಂದು ನೋಡಿದ ಚಿನ್ನಯ್ಯ, ಏನೋ ಸರ್ವನಾಶವಾದವನ ಹಾಗೆ ಧಟ್ಟನೆ ಮನೆಯೊಳಕ್ಕೆ ಹಿಂದಿರುಗಿದ.

೩

ಸುಬ್ಬಯ್ಯಗೌಡರು ಆ ಸಮಯದಲ್ಲಿ 'ಗಾಡಿ ಯಾಕೆ ಇಷ್ಟು ಹೊತ್ತಾದರೂ ಬರಲಿಲ್ಲ?' ಎಂದು ಆಲೋಚಿಸುತ್ತಾ ಬಾಗಿಲಲ್ಲಿ ನಿಂತಿದ್ದರು ಚಂದ್ರಶೇಖರನ ತಂಗಿ ಗಂಗೂ ಅಣ್ಣಯ್ಯ ಬರುತ್ತಾನೆಂಬ ಸಮಾಚಾರ ಕೇಳಿ ತವರುಮನೆಗೆ ಹೊರಳಿದ್ದಳು. ಗಂಡ ಕೆಂಪಣ್ಣ, ಹೆಂಡತಿ ತವರು ಮನೆಗೆ ಹೋಗಿಬರುವುದಾಗಿ ಹೇಳಿದಾಗ, 'ನೀನೇನು ನಂ ಜತೇಲಿ ಸಂಸಾರ ಮಾಡೋವಕ್ಕೆ ಬಂದಿದೀಯೋ ಅಣ್ಣಯ್ಯನ್ನೇ ಕಟ್ಕೊಂಡು ಇರ್ತೀಯೋ'' ಎಂದು ನಕ್ಕು ನುಡಿದು ಆಕೆಯ ಕೆನ್ನೆಯ ಮೇಲೆ ಮೆಲ್ಲಗೆ ಒಂದೇಟು ಹಾಕಿದ. ಅವಳ ಕಂಕುಳಲ್ಲಿದ್ದ ಒಂದೂವರೆ ವರ್ಷದ ಮಗು ಏನೋ ಸತ್ಯ ಕಂಡ ಹಾಗೆ ಕೇಕೆ ಹಾಕಿತು—ಅದಕ್ಕೇನು ಅರ್ಥ ವಾಯಿತೋ ಏನೋ 'ಮೊಗ ಹುಟ್ಟಿದರೂ ನಿಮಗೆ ಇನ್ನೂ ಹುಡುಗಾಟ ತಪ್ಪಿಲ್ಲ. ನೀವು ಕೆನ್ನೆಗೆ ಹೊಡೆದದ್ದಕ್ಕೆ ಸಿಕ್ಷೆಯಾಗಿ ಇನ್ನು ಹದಿನೈದು ದಿವಸ ತೌರುಮನೇಲೇ ಇರ್ತೀನಿ' ಎಂದು ಹೇಳಿ ಕಣ್ಣಿನ ಸಮ್ಮೋಹನಾಸ್ತ್ರ ಅವನ ಕಡೆಗೆ ಎಸೆದು ಗಂಗೂ ತಾಯಿ ಮನೆಗೆ ಬಂದಿದ್ದಳು. ಮುಂಚೆಯೇ ಅತ್ತೆ ಮಾವಂದಿರ ಒಪ್ಪಿಗೆ ಪಡೆದಿದ್ದಳು ಅವರು ಹಿಂಬದಿಯಲ್ಲಿ ನಿಂತು ಮಗ ಸೊಸೆಯರ ಈ ಸಂಭಾಷಣೆ ಕೇಳಿ ನಕ್ಕು ಸುಮ್ಮನಾಗಿದ್ದರು ಬಹುಶಃ ತಮ್ಮ ಎಳೆತನದ ದಾಂಪತ್ಯ ನೆನಸಿಕೊಂಡರೇನೊ. ಗಂಗೂ, ಗಾಡಿ ಬರುವ ವೇಳೆಯಲ್ಲಿ ತಂದೆ ಸುಬ್ಬಯ್ಯಗೌಡರ ಹಿಂದೆ ಲಾಂದ್ರ ಹಿಡಿದು ನಿಂತಿದ್ದಳು ಹಿಂದೆಯೇ ತಾಯಿ ಈರವ್ವನೂ ಪ್ರತೀಕ್ಷೆಯೇ ಕಣ್ಣಾಗಿ ನಿಂತಿದ್ದಳು

ಗಾಡಿ ನಿಂತ ಕೂಡಲೆ ಚಂದ್ರಶೇಖರ ಇಳಿದ. ಗೌಡರು 'ಯಾಕೋ ಚಂದ್ರ ಇಷ್ಟೊಂದು ಹೊತ್ತು?' ಎಂದರು

'ಬಸ್ಸು ಕೆಟ್ ಹೋಗಿತ್ತು' ಎಂದು ಚಂದ್ರ ಹೇಳಿದ.

ಲಾಂದ್ರ ಕೆಳಗಿಟ್ಟು, ತಾಯಿಯ ಕೈಯಲ್ಲಿದ್ದ ಚೆಂಬು ಈಸಿಕೊಂಡು 'ನೀರು ತಕೋ ಅಣ್ಣಯ್ಯ' ಎಂದಳು ಗಂಗೂ.

'ಕೈಗೆ ನೀರು ಹಾಕಿಸಿಕೊಳ್ಳುತ್ತಾ ಚಂದ್ರಶೇಖರ, 'ನಿಂ ಮಗ ಎಲ್ಲೀ?' ಎಂದ.

'ಒಳಗೆ ಮಲಗವ್ನೆ ನೀ ಬರ್ತೀಯಾ, ಅರ್ಧರಾತ್ರೀಗೆ, ಅಂತ ಕಾದು ಕೂತಿರ್ತಾನಾ? ಇಷ್ಟಕ್ಕೆ ಈ ಮನೇಗೆ ನೀನೇನೂ ಯಜಮಾನ ಅಲ್ಲ, ಬಂದ ತಕ್ಷಣ ಎಲ್ಲಾರೂ ಎದುರ್‌ಗೊಳ್ಳೋಕೆ

'ಸಾಕೇ ಮಾರಾಯ್ತಿ, ನಿನ್ನ ಕಣಿ ನಾ ಕೇಳಿದೆನಾ ಅದನ್ನ? ಮಗ ಎಲ್ಲೆ ಅಂದರೆ ಮೊಕಾನೇ ಪರಚ್ತೀಯಾ?'

'ಮತ್ತೆ ನೀ ಕೇಳೋ ತೀರು ಅಂತಾದ್ದು' ಎಂದು ಉತ್ತರಿಸಿದಳು' ಗಂಗೂ.

'ಏನೇ ಅದು ನಿಂ ಜಗಳಾ? ಇನ್ನೂ ಅವನು ಬರೋಕಿಲ್ಲ ,ಆಗ್ಲೇ ಜಗಳಾ ಶುರು ಮಾಡಿದ್ಯಾ? ಇದ್ಕೇ ಬಯಸಿ ಬಯಸಿ ಬಂದ್ಯೇನೋ ಇಲ್ಲೀಗೆ, ಅಣ್ಣಯ್ಯ ಬರ್ತಾನೆ ಅಂತ.' ಎಂದು ಬಾಯಿ ಹಾಕಿದಳು, ಈರವ್ವ, ನಗುತ್ತ.

'ಗಂಡನ ಮನೇಗೆ ಹೋದರೂ ಬಾಯಿ ಬಿಗಿ ಹಿಡ್ಯೋದು ಕಲೀಲಿಲ್ಲ. ಹಿಂಗಾದರೆ ಕಟ್ಟಿಕೊಂಡವನ ಪಾಡೇನೋ' ಎಂದ ಚಂದ್ರಶೇಖರ.

'ಮುಚ್ಕೋ ಬಾಯಿ, ಕಂಡಿದಾರೆ, ನಾಳೆ ನಿನ್ನ ಚೆನ್ನಿ ಮನೇಗೆ ಬಂದ್ಮೇಲೆ ನೀ ಮಾಡೋದ್ನ' ಎಂದಳು ಗಂಗೂ.

'ಚೆನ್ನೀನೇ ಆಗ್ಬೇಕೇನು ನಂ ಚಂದ್ರುಂಗೆ? ಯಾಕೆ, ಅವರ ಮನೆ ಯೋರ ಜಗಳ ಈಗಲೇ ಸಾಲದು ಇನ್ನು ಅವರ ಮನೆ ಹೆಣ್ಣೂ ತಂದ್ಕೊಂಡು ಬೀದೀಲ್ಹೋಗೋ ಮಾರಿ ಇತ್ತಿತ್ತ ಬಂದು ಹೋಗು ಅಂತ ಮಾಡಿಕೋ ಬೇಕಾ? ಯಾರಿಗೆ ಬೇಕು, ಆ ಜಗಳಗಂಟಿಗಳ ಸಾವಾಸ?' ಎಂದಳು ಈರವ್ವ.

'ನೀ ಹೇಳಿದ್ಹಂಗೆ ಕೇಳ್ತಾನಾವ್ವ ಅಣ್ಣಯ್ಯ? ನಾ ಚೆನ್ನೀನೇ ಮದುವೆ ಆಗೋದು ಅಂತ ಅಣ್ಣಯ್ಯ ಹಟ ಹೂಡಿದ್ರೆ ನೀ ಏನು ಮಾಡೀಯೋ?' ಎಂದಳು ಗಂಗೂ.

ಚೆನ್ನಿಯ ಹೆಸರು ಕೇಳಿದಾಗ ಚಂದ್ರಶೇಖರನ ಕಣ್ಣು ಅರಳಿತ್ತು. ಈ ಜೀವನದಲ್ಲಿ ಯಾರಾದರೂ ತನ್ನ ಜತೆಗಾತಿಯಾಗುವುದಾದರೆ

ಚೆನ್ನಿಯೇ ಎಂದು ಅವನು ಎಂದೋ ತೀರ್ಮಾನ ಮಾಡಿದ್ದ. , ಎಳೆಯ ದಾದ ಎಣ್ಣೆಗೆಂಪಿನ ಮುಖ ಎಸಳಾದ ಮೂಗು ಕಣ್ಣುರೆಪ್ಪೆಯೋ, ಮಿಂಚಿನ ಬಳೆ. ನಸುಜಾರಿದ ಎರಡೇ ಎರಡು ಮುಂಗುರುಳು. ಈ ರೂಪಕ್ಕೆ ಮೆರುಗು ಕೊಟ್ಟ ಹಾಗೆ ಮುಗ್ಧತೆ ಈ ರೂಪನ್ನು ಕೊನೆಯ ಬಾರಿ ಕಂಡದ್ದು ಎರಡು ವರ್ಷದ ಹಿಂದೆ, ಚಿನ್ನಯ್ಯನ ಮದುವೆಗಾಗಿ ಊರಿಗೆ ಬಂದಿದ್ದಾಗ ಅದರಿಂದಾಚೆಗೆ ಆಗೀಗ ಮಿಂಚುನೋಟ ಹಾಯ್ದು ಹೋದದ್ದಷ್ಟೆ. ಚಿನ್ನಯ್ಯನ ಮದುವೆಯಲ್ಲಿ ಸೇರಿದ್ದ ಊರ ಜನ ಆಗಲೇ ಇವರಿಬ್ಬರೂ ಗಂಡಹೆಂಡಿರೆಂದು ತೀರ್ಮಾನ ಮಾಡಿದ್ದರು ಆದರೆ ಅದಕ್ಕೂ ಮುಂಚೆ ಚಿಕ್ಕಂದಿನಲ್ಲೇ ಇವರು ಒಬ್ಬರಿಗೊಬ್ಬರು ಹಾಗೆ ಆಟ ಆಡಿದ್ದರು. ಈ ಆಟಕ್ಕೆ ಅಂದು ಹಳ್ಳಿಯ ಹತ್ತು ಸಮಸ್ತರ ಒಪ್ಪಿಗೆಯ ಮುದ್ರೆ ಬಿತ್ತಷ್ಟೆ. ಆಗ ಚೆನ್ನಿಯ ಮುಖ ಕಡುಗೆಂಪಾಗಿತ್ತು. ಆದರೆ ನಸು ನಗೆಯೊಂದು ಕಂಡೂ ಕಾಣದಂತೆ ತುಟಿಯ ಮೇಲೆ ಮಿನುಗುತ್ತಿತ್ತು. ಚಿನ್ನಯ್ಯನ ಮದುವೆಯ ದಿನ ಸಂಜೆ ಬಂದವರು ಯಾರಿಗೋ ತಾಂಬೂಲ ಕ್ಕೆಂದು ತೆಂಗಿನಕಾಯಿ ತರಲು ಚೆನ್ನಿ ಉಗ್ರಾಣಕ್ಕೆ ಹೋಗಿದ್ದಾಗ ಚಂದ್ರ ಶೇಖರ ಹಿಂಬಾಲಿಸಿ 'ಚೆನ್ನೀ' ಎಂದ.

ಒಂದು ಗಳಿಗೆಯಾದ ಮೇಲೆ 'ಆ?' ಎಂದಳು.

'ನನ್ನ ಮದುವೆ ಆಗ್ತೀಯಾ?'

ಮಾತಿಲ್ಲ.

'ಹೇಳು ಚೆನ್ನೀ.'

'ಆದರೆ ನಾನು ಹಳ್ಳೀವ್ಳು ಹೆಸರೂ ಚೆನ್ನೀ ಅಂತ ಹಳ್ಳೀ ಹೆಸರು. ನೀವು ಒಪ್ತೀರಾ?' ಎಂದಳು ಇಷ್ಟು ಹೇಳುವುದಕ್ಕೆ ಅವಳಿಗೆ ಎಷ್ಟೋ ಪ್ರಯಾಸವಾಗಿತ್ತು. ಇಷ್ಟು ಮಾತು ಹೇಗೆ ಆಡಿದೆನೆಂದು ಆಡಿದ ಮೇಲೆ ಅವಳಿಗೇ ಆಶ್ಚರ್ಯವಾಗಿತ್ತು.

'ನೀನೇನು ಚೆನ್ನಾಗಿಲ್ವೆ ಚೆನ್ನಿ? ಪಂಜರದ ಗಿಣಿಗಿಂತ ಕಾಡಿನ ಹಕ್ಕಿ ಎಷ್ಟೋ ಚೆನ್ನ ನಿನ್ನ ಹೆಸರ್ನಲ್ಲೂ ಚೆನ್ನಾಗಿಲ್ಲದ್ದೇನಿದೆ? 'ಚೆನ್ನಿಗ ರಾಯ' ಎಂತ ದೇವರ್ನ್ನೇ ಕರೆಯೋದಿಲ್ವೆ? ನೀ ಒಪ್ಪಿದರೆ ನಂ ಬಾಳು

ಸಾರ್ಥಕ' ಎಂದ. ಅವನಂತೂ ಭಾವಜೀವಿ. ಆ ಸಮಯದಲ್ಲಿ ನೆಲದ ಮೇಲೆ ಇರಲೇ ಇಲ್ಲ....

ಚೆನ್ನಿ ಮಾತಾಡಲಿಲ್ಲ. ಚಂದ್ರಶೇಖರನ ಕೈಯನ್ನು ಮೆದುವಾಗಿ ಅಮುಕುತ್ತಿದ್ದಳು....

ತಂಗಿ ತಾಯಿಯರು ಚೆನ್ನಿಯ ಮದುವೆಯ ಮಾತೆತ್ತಿದಾಗ ಇದೆಲ್ಲ ಅವನ ಮನಸಿನ ಮುಂದೆ ಮಿಂಚಿಹೋಯಿತು. ಆದರೆ ಆಮೇಲೆ ತಾಯಿ ಆಡಿದ ಮಾತಿನಿಂದ ಅದಕ್ಕೆಲ್ಲಿ ವಿಘ್ನ ಒದಗೀತೋ ಎಂದು ನಡುಗಿದ. ತಾಯಿಯ ಮಾತಿಗೆ ಪ್ರತಿಯಾಗಿ ತಂಗಿ, 'ಅಣ್ಣಯ್ಯ ಹಟ ಹೂಡಿದ್ರೆ ನೀ ಏನು ಮಾಡೀಯೆ?' ಎಂದು ಹೇಳಿದ ಮಾತಿನಿಂದ ಅವನ ಮನಸ್ಸು ದೃಢವಾಗಿತ್ತು. ಅಷ್ಟರಲ್ಲಿ ಗೌಡರು,—

'ಏನ್ರೀ ನಿಂ ಮಾತು? ದಣಿದು ಬಂದವ್ನೆ ಅನ್ನೋದ್ನೆ ಮರೆತು ತಾಯಿ ಮಗಳು ಪುರಾಣ ಹೊಸೀತಾ ಇದೀರಿ. ಮೊದಲು ಊಟಕ್ಕಿಕ್ಕಿ' ಎಂದರು. ಅವತ್ತು ಶನಿವಾರವಾದ್ದರಿಂದ ಗೌಡರು ರಾತ್ರಿ ಊಟ ಮಾಡುವಂತಿರಲಿಲ್ಲ.

ತಾಯಿ ಮಗಳು ಅಡುಗೆ ಮನೆಗೆ ನಡೆದರು. ಚಂದ್ರ ಹೆಗಲ ಮೇಲಣ ಟವಲಿನಿಂದ ಮುಖ ಕೈಕಾಲು ಒರಸಿಕೊಂಡು ಏನೋ ಯೋಚಿಸುತ್ತ ಒಳಗೆ ನಡೆದ.

ತಾಯಿ ಮಗನಿಗೆಂದು ಪ್ರೀತಿಯಿಂದ ಮಾಡಿದ್ದ ಅಡುಗೆಯನ್ನು ಒಂದೊಂದಾಗಿ ಬಡಿಸಿದರು. ಅವನಿಗೆ ಅದರ ಕಡೆ ಗಮನವೇ ಇಲ್ಲ. ತಂಗಿಯೂ ಅದೇ ತಾನೇ ಎದ್ದ ಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡು ಅಲ್ಲೆ ಕೂತಳು. ಚಂದ್ರ, 'ಎಲ್ಲೀ ನೋಡೋಣ ನಿನ್ನ ಕುಮಾರ ಕಂಠೀರವನ್ನ' ಎಂತ ಹೇಳಿ ಕುಳಿತಿದ್ದ ಹಾಗೆಯೇ ಮಗುವನ್ನು ಎತ್ತಿಕೊಂಡ. ಅದು ಇವನ ಒರಟುತನ ಸಹಿಸಲಾರದೆ 'ಕಿರ್ರೋ' ಎಂದು ಕಿರಚಿಕೊಂಡಿತು. ಸಾಲದ್ದಕ್ಕೆ ನಿದ್ದೆಗಣ್ಣು ಬೇರೆ. ಕೊನೆಗೆ ಮಗುವನ್ನು ಅದರ ತಾಯಿಯ ಕಡೆಗೆ ವಾಪಸ್ಸು ರವಾನಿಸಿದ. ಆ ಮಗು ಏನೂ ಆಗಲೇ ಇಲ್ಲವೇನೋ ಎಂಬಂತೆ ಒಮ್ಮೆಲೇ ತೆಪ್ಪಗಾಯಿತು. ಮಾತಿನ ನಡುವೆ ಚಂದ್ರ ಊಟ

ಮುಂದುವರಿಸಿದ. ತಾಯಿ ತಂಗಿಯರ ಪ್ರೀತಿಯ ಮುಂದೆ ಚಂದ್ರಶೇಖರ ಕರಗಿಹೋಗಿದ್ದ. ಇವನು ಒಂದು ಮಾತಾಡಿದರೆ ಅವರು ಹತ್ತು ವಿಷಯ ಹೇಳುತ್ತಿದ್ದರು. ಊಟ ಮುಗಿಯುವಷ್ಟರಲ್ಲಿ ಊರಿನ ವಿಚಾರವೆಲ್ಲ ಚಂದ್ರಶೇಖರನಿಗೆ ವರದಿಯಾಯಿತು. ಕೈ ತೊಳೆಯಲು ಎದ್ದಾಗ, ಊಟ ಇಷ್ಟು ಬೇಗ ಮುಗಿದುಹೋಯಿತೆ? ಇದೇ ರೀತಿ ಎಂದೆಂದಿಗೂ ಇರ ಬಾರದೆ? ಎಂದು ಚಂದ್ರಶೇಖರನಿಗೆ ಎನಿಸಿರಬೇಕು.

ಕೈ ಒರಸಿಕೊಂಡು ಚಂದ್ರಶೇಖರ ಪುನಃ ಒಳಗೆ ಬಂದ ತಾಯಿ ತಂಗಿಯರು ಊಟಕ್ಕೆ ಅಣಿ ಮಾಡಿಕೊಳ್ಳುತ್ತಿದ್ದರು. ಅವರ ಊಟ ಆಗಿ ಕೆಲಸವೆಲ್ಲ ತೀರುವವರೆಗೂ ಅವನು ಆ ಜಾಗ ಬಿಟ್ಟು ಕದಲಲಿಲ್ಲ. ಬಹು ಕಾಲದಿಂದ ಜನಸಂಪರ್ಕವೇ ಇಲ್ಲದವರಂತೆ ಅವರು ಮೂವರೂ ಮಾತಿನಲ್ಲಿ ನಿರತರಾಗಿದ್ದರು.

ಕೊನೆಯಲ್ಲಿ ಅವನು ಎದ್ದು ಕೊಟಡಿಗೆ ಹೋಗಿ ನೋಡಿದಾಗ ಯಾವುದೋ ಮಾಯದಲ್ಲಿ ತಂಗಿ ತನಗಿಂತ ಮುಂಚೆ ಎದ್ದು ಬಂದು ಹಾಸಿಗೆ ಸಿದ್ಧಪಡಿಸಿದ್ದುದನ್ನು ಕಂಡ. ಅವನ ಹಿಂದೆಯೇ ಗಂಗೂ ಒಂದು ಹಿತ್ತಾಳೆ ಲೋಟದ ತುಂಬ ಹಾಲು ತಂದು, 'ತಕೋ ಅಣ್ಣಯ್ಯ' ಎಂದು ಕೊಟ್ಟಳು.

ಚಂದ್ರಶೇಖರ ಅದನ್ನು ತೆಗೆದುಕೊಳ್ಳುತ್ತಾ, 'ಏನು ಗಂಗೀ ಉಪ ಚಾರ? ಆಗ ಬೈದದ್ದಕ್ಕೆ ಇದು ದಂಡಾನೋ? ಅಥ್ವಾ, ನಿನ್ನ ಮಗಂಗೆ ನನ್ನ ಹೆಣ್ಣುಕೊಡಲಿ ಅಂತ ಈಗಿನಿಂದ ಮೆಹರ್ಬಾನೀನೋ?' ಎಂದ.

'ಮೊದ್ಲು ನೀ ಚೆನ್ನೀನ ಮದುವೆ ಆಗು. ಆಗ ಕಾಣಿಸ್ತದೆ ಹಬ್ಬ. ಲೇ ಅನ್ನೋಕೆ ಅವ್ಳೇ ಇಲ್ಲ,—ಹೆಣ್ಣು ಕೊಡೋಕಿಲ್ಲ, ಅನ್ನೊ ಜಂಬ ಯಾಕೆ?' ಎಂದಳು.

ಮಾತು ಇನ್ನೂ ಹೇಗೆ ಹೇಗೆ ಬೆಳೆಯುತ್ತಾ ಇತ್ತೋ, ಅಷ್ಟರಲ್ಲಿ ಗೌಡರು 'ಚಂದ್ರಾ' ಎನ್ನುತ್ತಾ ಬಂತರು. ಗಂಗೂ ಹೊರಗೆ ಹೋದಳು. ಚಂದ್ರಶೇಖರ ಹಾಸಿಗೆಯ ಮೇಲೆ ಅರ್ಧ ಒರಗಿದ್ದವನು ಎದ್ದು ನಿಂತ.

'ಪರೀಕ್ಷೇಲಿ ಚೆಂದಾಗಿ ಮಾಡಿದೀಯೇನೋ?'

'ಸುಮಾರಾಗಿ ಮಾಡಿದೀನಿ.'

'ಮುಂದಕ್ಕೆ ಏನ್ಮಾಡ್ತೀಯಾ?'

ಚಂದ್ರ ಸ್ವಲ್ಪ ತಡೆದ. ಅವನಿಗೆ ಏನು ಹೇಳಬೇಕೋ ತೋರಲಿಲ್ಲ. ಸ್ವಲ್ಪ ಹೊತ್ತಾದಮೇಲೆ, 'ಇಲ್ಲೇ ಇರ್ಬೇಕೂ ಅಂತಿದೀನಿ' ಎಂದು ನಿಧಾನವಾಗಿ ಇಳಿದನಿಯಲ್ಲಿ ನುಡಿದ.

ಗೌಡರು ಈ ಉತ್ತರ ನಿರೀಕ್ಷಿಸಿರಲಿಲ್ಲ, ಒಂದು ಗಳಿಗೆ ಅವರು ಮೂಕರಾದರು ಅವರ ಮುಗಿಲ ಸೌಧ ಕುಸಿದುಬಿತ್ತು. ಚಂದ್ರಶೇಖರನೇ ಮಾತು ಮುಂದುವರಿಸಿದ—

'ನಂಗೆ ದೊಡ್ಡ ಹುದ್ದೇನೇ ಸಿಕ್ತು ಅಂತ ಇಟ್ಕೊಳ್ಳೋಣ. ಅದರಿಂದ ಏನು ಪ್ರಯೋಜನ? ನೀವೆಲ್ಲ ಇಲ್ಲಿರೋದು, ನಾನು ಊರೂರು ಅಲೆಯೋದು. ಅದರ ಬದಲು ಇಲ್ಲೇ ಇದ್ದು ಈ ಊರಲ್ಲೇ ಏನಾರಾ ಮಾಡೋಣ ಎಂತ ....' ಎಂದ. ಅವನ ತಂದೆಯಿದಿರು ಯಾವತ್ತೂ ಇಷ್ಟು ಮಾತಾಡಿರಲಿಲ್ಲ. ಅವನ ಮನೋನಿಶ್ಚಯು ಅವತ್ತು ಹಾಗೆ ಮಾತಾಡಿಸಿತ್ತು.

'ಏನು ಊರೋ ಏನು ಮಾಡ್ತೀಯೊ. ನಂಗೇನೂ ಗೊತ್ತಾಗೋಕಿಲ್ಲ ಓದಿದವರು ನೀವು. ನಾನೇನು ಬಲ್ಲೆ?' ಎಂದರು. ಮಗನ ಗುಣ ಹಿಂದಿನಿಂದಲೂ ಅವರಿಗೆ ಚೆನ್ನಾಗಿ ಗೊತ್ತು. ಯೋಚನೆ ಮಾಡದೆ ಅವನು ಎಂದೂ ಏನೂ ಹೇಳಿದವನಲ್ಲ ತಂದೆಯಲ್ಲಿ ಮಗನಿಗೆಷ್ಟು ಗೌರವವೋ ವಯಸ್ಸಿಗೆ ಬಂದ ಮಗನ ವಿಚಾರದಲ್ಲಿ ತಂದೆಗೂ ಅಷ್ಟೇ ಗೌರವ. ಆದರೆ ಅವನದು ಭಕ್ತಿ ಬೆರೆತ ಗೌರವ, ಇವರದು ಪ್ರೀತಿ ಬೆರೆತ ಗೌರವ. ಆದ್ದರಿಂದ ಅವನಿಗೆ ಇಷ್ಟ ಬಂದ ಹಾಗೆ ಮಾಡಲಿ. ಒಂದು ಪಕ್ಷ ತಮ್ಮ ಇಷ್ಟ ಅವನ ಮೇಲೆ ಹೇರಿದರೆ ಬಲವಂತ ಮಾಘಸ್ನಾನ ಆದೀತಲ್ಲವೇ? ಎಂದುಕೊಂಡರು.

ತಂದೆ ಹೋಗುವಾಗ ತಣ್ಣನೆಯ ಸುಳಿಗಾಳಿಯೊಂದು ಬೀಸಿ ದೀಪದ ಕುಡಿಯ ಬೆಳಕು ಹೊಯ್ದಾಡಿ ಕೋಣೆಯ ಗೋಡೆಯ ಮೇಲಣ ನೆರಳು ಚಂಚಲವಾಗಿ ಅಲುಗಾಡಿತು. ಚಂದ್ರಶೇಖರ ಆ ನೆರಳನ್ನೆ ನಿಟ್ಟಿಸುತ್ತ ಹಾಸಿಗೆಯೊರಗಿ ನಿದ್ದೆ ಹೋದ.

೪

ಚಂದ್ರಶೇಖರನಿಗೆ ಎಚ್ಚರವಾದಾಗ ನಸುಕು ಆಗತಾನೆ ಹರಿಯು ತ್ತಿತ್ತು. ರಾತ್ರಿ ಮಲಗಿದಾಗ ಅವನು ದೀಪ ಆರಿಸಿರಲಿಲ್ಲ. ತಾಯಿ ಮಲಗುವಾಗ ಬಂದು ನೋಡಿ ದೀಪ ಹಾಗೆಯೇ ಇದ್ದದ್ದನ್ನು ಕಂಡು ಸಣ್ಣಗೆ ಮಾಡಿ ಹೋಗಿದ್ದಳು. ದೀಪ ಇನ್ನೂ ಉರಿಯುತ್ತಿತ್ತು. ಪಕ್ಕದ ಗೋಡೆಯಾಚೆ, ನೆರೆಮನೆಯ ಹೆಣ್ಣೊಬ್ಬಳು ಯಾವಾಗಲೋ ಎದ್ದು ಬೀಸುವ ಕಲ್ಲು ತಿರುಗಿಸುತ್ತ ಹಾಡುತ್ತ ಇದ್ದಳು. ಚಂದ್ರಶೇಖರನಿಗೆ ಎಚ್ಚರವಾದಾಗ ಅವಳು,—

ಬಾಳಯ್ಯ ಬಾಳು ಬಾಳೇಯ ಸುಳಿಯಾಗಿ
ಬಾಳೆ ಸುಳಿಯಲ್ಲಿ ಗೊನೆ ಬಿಟ್ಟು।
ಬಾಳೆ ಸುಳಿಯಲ್ಲಿ ಗೊನೆ ಬಿಟ್ಟು। ಅಣ್ಣಯ್ಯ
ಬಾಳೇಯ ತಂದ ಹೆಸರ್ಹೇಳಿ॥

ಎಂಬ ಪದ ಹೇಳುತ್ತಾ ಇದ್ದಳು. ಚಂದ್ರಶೇಖರ ಹಾಡನ್ನೆ ಆಲಿಸುತ್ತಾ ಮಲಗಿದ್ದ. ಒಂದೊಂದಾಗಿ ಹಳ್ಳಿಯ ಬಾಳಿನ ಎಲ್ಲ ಮುಖಗಳೂ ಹಾಡಾಗಿ ಅವಳ ಬಾಯಿಂದ ಹರಿದವು. ಹಳ್ಳಿಯ ಜನರ ಮುಗ್ಧಪ್ರೇಮ ಜೀವನ, ಅವರ ಆಸೆ, ನಿರಾಸೆ, ನೋವು, ಕಾವು, ದುಗುಡ, ಕನಿಕರ, ದೈವಭಕ್ತಿ, ಪರಂಪರಾಪ್ರಿಯತೆ ಎಲ್ಲಾ ಹಾಡಲ್ಲಿ ಹೊನಲಾಗಿ ಹರಿದವು. ಆಕೆಯ ಮಧುರ ಕಂಠಕ್ಕೆ ಶೃತಿಗೂಡಿ ಬೀಸುವ ಕಲ್ಲು ಲಯಬದ್ಧವಾಗಿ ಶಬ್ದ ಮಾಡುತ್ತಾ ತಿರುಗುತ್ತಿತ್ತು. ಆಕೆಯ ಕೈಯ ಕಡಗ–ಬಳೆಗಳ ಸದ್ದೂ ಜಣ್-ಜಣಕ್, ಜಣ್-ಜಣಕ್ ಎಂದು ತಾಳ ಕೂಡಿಸಿತ್ತು. ಎಂಥ ಹಳ್ಳಿ, ಎಂಥ ಬಾಳು. ಆದರೆ ಈಗ ಇದೆಲ್ಲ ಹಳ್ಳಿಗರ ಹಾಡಿನಲ್ಲಿ ಮಾತ್ರ ಉಳಿದಿದೆ. ಹಳ್ಳಿ ಇಂದು ಗೋಳ ಕಡಲಾಗಿದೆ, ಮಾತ್ಸರ್ಯದ ಮನೆಯಾಗಿದೆ, ದಾರಿದ್ರ್ಯದ ತವರಾಗಿದೆ—ಎಂದು ಚಿಂತಿಸುತ್ತಾ ಚಂದ್ರ ಶೇಖರ ಹಾಗೆಯೇ ಅರೆನಿದ್ದೆಗೆ ಇಳಿದ. ಕೊನೆಗೆ ಮತ್ತೆ ಎಚ್ಚರವಾಯಿತು. ಪಕ್ಕದ ಮನೆಯ ಹೆಣ್ಣು ಮೊರದಲ್ಲಿ ಉಳಿದಿದ್ದ ಧಾನ್ಯವನ್ನು ಒಟ್ಟಿಗೆ ಕಲ್ಲಿನ ಬಾಯಿಗೆ ಸುರಿಯುತ್ತ ಮೊರವನ್ನು ಒಂದು ಸಾರಿ ತಟ್ಟಿದಳು.

ಕಲ್ಲಿನ ಗೂಟಕ್ಕೆ ಮತ್ತೆ ಕೈ ಕೊಟ್ಟು ಕೊನೆಯ ಹಾಡು ಹೇಳಿ ಮುಗಿಸಿದಳು :

ಅಕ್ಕ ಸರಸೋತಿಯೆ ನಾನು ಚಿಕ್ಕವಳೆಂದು
ಹೊತ್ಮೀರಿ ಹಿಡಿದೆ ಕಲ್ಲನ್ನು |
ಹೊತ್ಮೀರಿ ಹಿಡಿದೆ ಕಲ್ಲನ್ನು | ಸರಸೋತಿಯೆ
ತುಯ್ದು ಬಿಡುತೀನಿ ಮಲಗವ್ಮ ||

ಎಂದು ಹೇಳಿ ಬೀಸುವುದು ನಿಲ್ಲಿಸಿದಳು ಚಂದ್ರಶೇಖರನ ಕನಸೂ ಹರಿಯಿತು. ಎದ್ದವನೇ ಹೆಗಲ ಮೇಲೊಂದು ಟವಲು ಹಾಕಿಕೊಂಡು ಕೆರೆ ಕಡೆ ಹೊರಟ.

ಅವನು ಹೋದದ್ದು ಹಿಂದಣ ರಾತ್ರಿ ಊರಿಗೆ ಬರುವಾಗ ದಾರಿಯಲ್ಲಿ ಸಿಕ್ಕಿದ ಕೆರೆಗೇಯೆ. ಅದರ ಸುತ್ತ ಜೊಂಡು ಬೆಳೆದಿದ್ದು ಮಧ್ಯದಲ್ಲಿ ಮಾತ್ರ ನೀರಿತ್ತು. ನೀರಿಗಿಳಿದು ಮುಖ ಕೈಕಾಲು ತೊಳೆದುಕೊಳ್ಳಲೂ ದನಕರುಗಳ ಮೈ ತೊಳೆಯಲೂ ಓಡಾಡಿ ಒಂದು ಕಡೆ ಮಾತ್ರ ಜೊಂಡು ಬೆಳೆದಿರಲಿಲ್ಲ. ಚಂದ್ರಶೇಖರ ಆ ಜಾಗದಲ್ಲಿ ಕೆರೆಗೆ ಇಳಿದ ನೀರಿನ ವಾಸನೆ ಮೂಗಡಸುತ್ತಿತ್ತು. ಅವನಿಗೆ ಆ ನೀರನ್ನು ಮುಖ ತೊಳೆಯಲು ಉಪಯೋಗಿಸಲು ಮನಸ್ಸು ಬರಲಿಲ್ಲ. ಮನೆಯಲ್ಲಿ ಬಾವಿಯ ನೀರಿನಲ್ಲಿ ಮುಖ ತೊಳೆದುಕೊಳ್ಳೋಣವೆಂದು ಹಿಂದಿರುಗಿ ಏರಿಯ ಮೇಲೆ ಬಂದು ದೂರದಲ್ಲಿ ಮೂಡಲ ಕೆಂಬಣ್ಣ ನೋಡುತ್ತಾ ಕುಳಿತ.

ನೇಸರ ಪ್ರಥಮ ಕಿರಣ ಆಗತಾನೆ ನೆಲದ ಮೇಲೆ ಬೀಳತೊಡಗಿತ್ತು. ಆ ತಿಳಿಯಾದ ಮೆದುವಾದ ಸ್ವರ್ಣಕಿರಣದಲ್ಲಿ ಸುತ್ತಣ ಹಸುರೆಲ್ಲ ಹೊಂಬಣ್ಣದ ಮೆರಗು ತಳೆದು ಮೆರೆಯುತ್ತಿತ್ತು. ಆಗಸದತ್ತ ಚಿಮ್ಮಿದ ಕಿರಣ ಮುಗಿಲ ಚೂರುಗಳಲ್ಲಿ ತೂರಿ ನಾನಾ ಬಣ್ಣ ಚಿಮುಕಿಸಿದ್ದವು. ಕಾಣದ ಕೈಯ ಚಾತುರ್ಯ ನೆನೆಯುತ್ತ ಚಂದ್ರಶೇಖರ ಮೈಮರೆತು ಕೂತಿದ್ದ. ಮುಂದಣ ಕೆರೆಯ ಅಸಹ್ಯಸ್ಥಿತಿ ಅವನೂರಿನ ಅಂದಿನ ಇರವಿನ ಸಂಕೇತವಾಗಿತ್ತು. ಮುಂಬೆಳಗಿನ ಬಣ್ಣದಾಟ ಭವಿಷ್ಯದ ಹೊಂಗನಸು ಕಾಣಿಸುತ್ತಿತ್ತು. ಈ ಎರಡರ ನಡುವಣ ಕಾರಣಪುರುಷನೋ ಎಂಬ ಹಾಗೆ

ಚಂದ್ರಶೇಖರ ಕುಳಿತಿದ್ದ. ಪಕ್ಕದ ರೆಂಬೆಯ ಮೇಲಣ ಹಕ್ಕಿಯೊಂದು ಈ ಕಾರಣಪುರುಷನ ಬರವನ್ನು ತೂರ್ಯಧ್ವನಿಗೈದು ಸಾರುತ್ತಾ ಇತ್ತು. ಊರಿನ ಜನ ಒಬ್ಬೊಬ್ಬರಾಗಿ ಬಂದು ಅದೇ ನೀರಲ್ಲೇ ಸ್ವಲ್ಪವೂ ಅಸಹ್ಯವಿಲ್ಲದೆ ಮುಖ ತೊಳೆದುಕೊಂಡು ತೆರಳುತ್ತಿದ್ದರು. ಕೆರೆಯ ಏರಿಯ ಮೇಲೆ ಸಂಚಾರ ಹೋಗಿದ್ದ ಊರಿನ ಉಪಾಧ್ಯಾಯರಾದ ನರಸಿಂಹಯ್ಯ ಕೈಯಲ್ಲಿ ಮಾವಿನಕಡ್ಡಿ ಹಿಡಿದು ಬರುತ್ತಿದ್ದವರು ಚಂದ್ರಶೇಖರನನ್ನು ಕಂಡು, 'ಏನು ಚಂದ್ರಶೇಖರಯ್ಯನವರೆ, ಇಲ್ಲಿ? ನಮಸ್ಕಾರ' ಎಂದರು. ಎರಡು ವರ್ಷದ ಹಿಂದೆ ಚಿನ್ನಯ್ಯನ ಮದುವೆಗೆ ಬಂದಿದ್ದಾಗ ಅವನ ಪರಿಚಯ ಅವರಿಗಾಗಿತ್ತು.

ನರಸಿಂಹಯ್ಯನಿಗೆ ಮಧ್ಯವಯಸ್ಸು. ವಿಶಾಲವಾದ ಹಣೆ. ತೀಕ್ಷ್ಣವಾದ ಕಣ್ಣು. ಜೀವನದ ಅನುಭವದ ಕುರುಹಾಗಿ ಎರಡೇ ಎರಡು ಗೆರೆ ಹಣೆಯ ಮೇಲೆ ಮೂಡಿತ್ತು. ಆದರೆ ಸೋಲಿಗೆ ಎದೆಗುಂದದ ವಿಜಯದ ನಗೆ ಅವರ ಮೊಗದ ಮೇಲೆ. ಹಳ್ಳಿಯ ಜೀವನದಲ್ಲಿ ಬೆರೆತು ಜನಸೇವೆ ಮಾಡಬೇಕೆಂಬ ಹಂಬಲ ಬಹಳ. ಆದರೆ ಆ ಹಂಬಲ ಹಣ್ಣಾಗುವುದರೊಳಗೆ ಒಂದೂರಿನಿಂದ ಇನ್ನೊಂದೂರಿಗೆ ವರ್ಗವಾಗಿ ಬಿಡುತ್ತಾ ಇತ್ತು. ಸಾಲದ್ದಕ್ಕೆ ಉಪಾಧ್ಯಾಯರಿಗೆ ಸಹಜವಾದ ಬಡತನ. ಅವರು ಈ ಊರಿಗೆ ಬಂದು ಇದೀಗ ಎರಡು ವರ್ಷವಾಗಿತ್ತು.

ನರಸಿಂಹಯ್ಯನವರಿಗೆ ಮಕ್ಕಳಿರಲಿಲ್ಲ. ನಾಲ್ಕೈದು ಮಕ್ಕಳು ಹುಟ್ಟಿ, ಹುಟ್ಟಿದ ಸ್ವಲ್ಪ ಕಾಲದಲ್ಲೆ ಸತ್ತು ಹೋದವು. ಕೊನೆಯ ಮಗು ವಂತೂ ಹಾಗೂ ಹೀಗೂ ಆಡಿ ಮೂರು ತಿಂಗಳು ದಾಟಿತ್ತು. ಇನ್ನು ಪರವಾಯಿಲ್ಲ, ಬದುಕಿಸಿದ, ನಮ್ಮಪ್ಪ, ದೇವರು—ಎಂದು ಕೊಂಡಿದ್ದರು ಯಾರೋ ಹೇಳಿದ್ದರು, 'ಗುಂಡಾ' ಎಂತ ಹೆಸರಿಡಿ, ಬದುಕಿಕೊಳ್ಳುತ್ತದೆ— ಎಂತ. ಆ ಹೆಸರಿನ ಪ್ರಭಾವದಿಂದಲೋ ಎಂಬ ಹಾಗೆ ಅದು ಬದುಕಿಕೊಂಡಿತ್ತು. ಆದರೆ ದೇವರು ಇವರ ಸುಖ ಸಹಿಸಲಿಲ್ಲ. ಮಗು ನಾಲ್ಕನೆ ತಿಂಗಳಲ್ಲಿ ಕಾಲಿಕ್ಕುತ್ತಿದ್ದಾಗ ಸೆಳೆತ ಬಂದು ತೀರಿಕೊಂಡಿತ್ತು.

ನರಸಿಂಹಯ್ಯನವರ—ಅದಕ್ಕಿಂತ ಹೆಚ್ಚಾಗಿ ಅವರ ಪತ್ನಿಯ—ಶೋಕ ಹೇಳಿ ತೀರದು. ಆದರೆ ಯಾರೇನು ಮಾಡಿಯಾರು? ಕೊನೆಗೆ

ಪುತ್ರಸುಖ ನಮ್ಮ ಹಣೇಲಿ ಬರೆದಿಲ್ಲ – ಎಂದು ಸಮಾಧಾನ ತಂದು ಕೊಂಡರು. ಕಂಡವರ ಮಕ್ಕಳನ್ನೆಲ್ಲಾ ಸ್ಕೂಲಿಗೆ ಕರೆದು ಶಿಕ್ಷೆ ಕೊಡೋದ ರಿಂದಲೇ ದೇವರು ಸಹಿಸೋಲ್ಲ. ಅದಕ್ಕೋಸ್ಕರ ಈ ದಂಡ— ಎಂದು ಒಮ್ಮೊಮ್ಮೆ ನಗುನಗುತ್ತ ಹೇಳುತ್ತಿದ್ದದ್ದೂ ಉಂಟು.

ಆದರೆ ಸ್ವಭಾವತಃ ನರಸಿಂಹಯ್ಯ ಬಹಳ ಒಳ್ಳೆಯವರು. ಒಂದು ದಿನವಾದರೂ ಹುಡುಗರಿಗೆ ಹೊಡೆದವರಲ್ಲ. ಪದ್ಧತಿಯ ಪ್ರಕಾರ ಅವರ ಮೇಜಿನಲ್ಲಿ ಒಂದು ಜತೆ ಎಳೆಯ ಬೆತ್ತ ಇತ್ತು. ಆದರೆ ಅದು ಎಂದೂ ಹುಡುಗರ ಮೈ ತಾಕಿರಲಿಲ್ಲ 'ಎದ್ದರೆ ಆಳಲ್ಲ. ಆದರೆ ಏಳೋಲ್ಲ' ಎಂಬ ಸಾಮತಿಯ ಪ್ರತೀಕ ಆ ಬೆತ್ತ ಮೇಷ್ಟರು ಇಲ್ಲದಾಗ ಹುಡುಗರು ಮೆಲ್ಲನೆ ಆ ಬೆತ್ತ ಎಳೆದು ತಮಾಷೆ ಮಾಡುತ್ತಿದ್ದದ್ದೂ ಉಂಟು. ಆದರೂ ಹುಡುಗರಿಗೆ ಅವರಲ್ಲಿ ಬಹು ಗೌರವ. ಅವರ ಮಾತು ಎಂದೂ ಮೀರು ತ್ತಿರಲಿಲ್ಲ.

ನರಸಿಂಹಯ್ಯನವರನ್ನು ಕಂಡು ಚಂದ್ರಶೇಖರ ಎದ್ದುನಿಂತು ಪ್ರತಿ ವಂದನೆ ಮಾಡಿದ. ಮೊದಲ ಉಪಚಾರದ ಮಾತೆಲ್ಲಾ ಆದ ಮೇಲೆ ಚಂದ್ರಶೇಖರ ಸಾಂಗೋಪಾಂಗವಾಗಿ ತನ್ನ ಎಲ್ಲ ಹಂಚಿಕೆ ಅವರಿಗೆ ತಿಳಿಸಿದ. ನರಸಿಂಹಯ್ಯ ಮೌನವಾಗಿ ಎಲ್ಲಾ ಕೇಳಿದರು. ಕೊನೆಯಲ್ಲಿ ಚಂದ್ರಶೇಖರನಿಗೆ ಹೇಳಿದರು :

'ನೋಡಿ, ಚಂದ್ರಶೇಖರಯ್ಯ. ನಿಮಗೆ ಒಂದು ಮಾತು ಹೇಳ ಬೇಕು. ಎಲ್ಲರೂ ಆಸೆಯಿಂದ ಹಳ್ಳಿಯ ಸುಧಾರಣೆ ಎಂತ ಕೈ ಹಾಕುತ್ತಾರೆ. ಆದರೆ ಕೊನೇಲಿ ಸಣ್ಣ ಮನಸ್ಸಿಗೆ ಜೋತು ಬಿದ್ದು ಇರೋ ಸಮಸ್ಯೇನ ಇನ್ನೂ ಉಲ್ಬಣ ಮಾಡುತ್ತಾರೆ. ಈಗ ಈ ಜಾತಿ ಪ್ರಶ್ನೇನೇ ತಕೊಳ್ಳಿ. ನಾನು ಬ್ರಾಹ್ಮಣ. ನೀವು ಒಕ್ಕಲಿಗರು. ಆದರೆ ಹೀಗಂತ ಯಾವಾಗ ನಾವು ಭಾವಿಸಿದೆವೋ ಅಲ್ಲಿಗೇ ಮುಗೀತು ಎನ್ನಿ, ಹಳ್ಳಿಯ ಸುಧಾರಣೆ. ನಾನು ಈ ಮಾತು ಅಂದದ್ದಕ್ಕೆ ಏನೂ ತಿಳಕೋಬೇಡಿ. ಇರೋ ವಿಚಾರ ನಿಮಗೆ ಹೇಳಿದೆ. ಚಾಕರಿ ಬೇಟೆಯ ಯುದ್ಧ ಮುಖದಲ್ಲಿ ಜಾತಿ ಗೊಂದ ಲಾನೇ ಹೊರತು ಅದನ್ನ ಸೇವಾಕ್ಷೇತ್ರಕ್ಕೆ ತಕೊಂಡು ಬಂದರೆ ಸರ್ವನಾಶ'

ಎಂದರು. ಅನುಭವಪೂರ್ಣವಾದ ಮಾತದು. ಚಂದ್ರಶೇಖರ ಸಮ್ಮತಿಸಿದ. ನರಸಿಂಹಯ್ಯ ಮುಂದುವರಿಸಿದರು:

'ಹಳ್ಳಿಯ ಸಮಸ್ಯೆ ಒಂದೇ, ಎರಡೇ? ಈಗ ನಮ್ಮ ಸ್ಕೂಲಿನ ವಿಚಾರಾನೇ ತಕೊಳ್ಳಿ. 'ದಿನಾ ಸ್ನಾನ ಮಾಡ್ರೋ; ಇರೋ ಬಟ್ಟೇನೇ ಒಗೀರ್ರೋ; ನಿಮ್ಮ ಮನೆ ಶುದ್ಧವಾಗಿಟ್ಟುಕೊಳ್ರೋ' ಎಂತ ಎಷ್ಟೋ ಹೇಳುತೇನೆ, ಹುಡುಗರಿಗೆ. ಆದರೆ ಅದೆಲ್ಲಾ ಗಾಳಿಗೆ ಹಾರಿಹೋಗುತ್ತೆ. ಯಥಾಪ್ರಕಾರ ಮೊದಲಿನ ಹಾಗೇ, ಒಬ್ಬನಿಗೆ ಕಜ್ಜಿ. ಇನ್ನೊಬ್ಬನಿಗೆ ವರ್ಷದ ಹಿಂದೆ ಆದ ಗಾಯ ಮಾಯೋ ಹಾಗೇ ಇಲ್ಲ. ಮತ್ತೊಬ್ಬನಿಗೆ ಕಣ್ಣುನೋವು. ಅರ್ಧಕ್ಕಿಂತ ಹೆಚ್ಚು ಹುಡುಗರಿಗೆ ಜ್ವರದ ಗಡ್ಡೆ. ಹೀಗೆ ನರಕಾನೇ ಎದುರಿಗೆ ಇರೋವಾಗ ಉತ್ಸಾಹ ಹ್ಯಾಗೆ ಬರುತ್ತೆ ಚಂದ್ರಶೇಖರಯ್ಯ?'

'ನಿಜ' ಎಂತ ತಲೆದೂಗಿದ ಚಂದ್ರಶೇಖರ.

'ಆದರೆ ಇದರಲ್ಲಿ ಇನ್ನೊಂದು ವಿಚಾರಾನೂ ನಾವು ಮರೀಬಾರದು. ಈ ಹುಡುಗರ ತಾಯಿತಂದೇರೇ ಹೀಗಿರೋವಾಗ ಹುಡುಗರು ಏನು ಮಾಡೋಕಾಗುತ್ತೆ? ಅದೂ ಅಲ್ಲದೆ ನಿಮ್ಮ ಸ್ಕೂಲಿಗೆ ಹುಡುಗರು ಬರುತ್ತಾರೆಯೇ ಹೊರತು ಹುಡುಗಿಯರು ಬರೋದೇ ಇಲ್ಲ. ನಾಳೆ ಮಕ್ಕಳನ್ನು ಸಾಕೋವರು ಅವರು ತಾನೆ? ಆದರೆ ಅವರಿಗೆ ವಿದ್ಯಾನೇ ಸೊನ್ನೆ. ಇದೆಲ್ಲಕ್ಕಿಂತ ಮುಖ್ಯವಾಗಿ ಜನರ ಬಡತನ. ಹೊಟ್ಟೇದೇ ಸಮಸ್ಯೆ ಆಗಿರೋವಾಗ ಹಸಿವು ಹಿಂಗದೆ ಬೇರೆ ಏನೂ ಸಾಧ್ಯವಿಲ್ಲ. ಈಗ ನೋಡಿ: ಅವರ ತಾತ ಮುತ್ತಾತಂದಿರ ಕಾಲದಿಂದ ಬಂದಿರೋ ಜಮೀನೇ ವಂಶಪಾರಂಪರ್ಯವಾಗಿ ಮಕ್ಕಳಲ್ಲಿ ಹರಿದು ಹಂಚಿ ಹೋಗ್ತಾ ಇದೆ. ತಂದೆಯ ಆಸ್ತಿ ಮಕ್ಕಳಲ್ಲಿ ಪಾಲಾಗಬೇಕಾದರೆ ಇರುವ ನಾಲ್ಕು ಬೇರೆ ಬೇರೆ ಹೊಲದಲ್ಲೂ ಒಬ್ಬೊಬ್ಬರಿಗೂ ಒಂದೊಂದು ಪಾಲು ಬೇಕು. ಇಲ್ಲಿ ಒಬ್ಬರಿಗೆ ಒಳ್ಳೆ ಹೊಲ ಬಂದು ಇನ್ನೊಬ್ಬರಿಗೆ ಕೆಟ್ಟದ್ದು ಹೋಗುತ್ತೋ; ಎಲ್ಲರಿಗೂ ಸಮಾನವಾಗಿರಲಿ ಎಂತ ಈ ಹಂಚಿಕೆ. ಹೀಗೆ ಹಿಡುವಳಿ ಭೂಮಿ ತುಂಡು ತುಂಡಾಗಿ ಇವೊತ್ತು ನಡುವಣ ದಿಂಡಿಗಾಗಿ ಎಷ್ಟೋ ಭೂಮಿ ವ್ಯರ್ಥವಾಗಿದೆ. ಅಲ್ಲದೆ ಇದರಿಂದ ಸಾಗುವಳಿ ಮಾಡೋದೂ ಕಷ್ಟ. ಇನ್ನು

ಅವರು ವ್ಯವಸಾಯ ಮಾಡೋದು ಒಬೀರಾಯನ ಪದ್ಧತೀಲಿ. ದನಕರು ನರಪೇತಲನ ಅವತಾರ. ಮನುಷ್ಯನ ಜತೇಲೇ ಅವೂ ಪಂದ್ಯ ಹೂಡಿವೆ ಇನ್ನು ಆ ತಿಪ್ಪೇ ಗುಂಡಿ, ಕೊಳಕು ಬೀದಿ—ದೇವರಿಗೇ ಪ್ರೀತಿ! ಸ್ಥಿತಿ ಹೀಗಿರೋವಾಗ ಉದ್ಧಾರ ಏನು ಬಂತು?' ಎಂದು ಚಂದ್ರಶೇಖರ ಮಾತು ಕೂಡಿಸಿದ.

'ಅದಕ್ಕೋಸ್ಕರ ನಾನು ಒಂದು ಕೆಲಸ ಮಾಡಬೇಕು ಅಂತ ಇದೇನೆ. ಊರಿನ ನನ್ನಂಥ ಹುಡುಗರನೆಲ್ಲಾ ಸೇರಿಸಿ ಅವರಿಗೆಲ್ಲಾ ವಿಚಾರ ತಿಳಿಸಿ ಮುಂದಣ ಏರ್ಪಾಡು ಮಾಡೋಣ. ಇದಕ್ಕೆ ನಿಮ್ಮ ಸಹಾಯಾನೂ ಬೇಕು. ನೀವು ಒಪ್ಪೋ ಹಾಗಿದ್ದರೆ ಇವತ್ತು ಮಧ್ಯಾಹ್ನ ಸ್ಕೂಲಿನಲ್ಲಿ ಸಭೆ ಸೇರಿಸೋಣ' ಎಂದ

'ಆಗಲಿ. ನಾನು ಏನು ಮಾಡಬೇಕು ಅಂದರೂ ಮಾಡೋಕೆ ಸಿದ್ಧ ಆದರೆ ಪಾರ್ಟಿ ಗೊಂದಲಕ್ಕೆ ಮಾತ್ರ ನಾ ಸಿಕ್ಕೋದಿಲ್ಲ' ಎಂದರು ನರಸಿಂಹಯ್ಯ.

'ಇಂಥ ಊರಿಗೆ ಒಂದು ವಾಚನಾಲಯ, ಸಂಘ ಇರಬೇಡವೆ? ಇದನ್ನೂ ಏರ್ಪಾಡು ಮಾಡೋಣ' ಎಂತಲೂ ಮಾತು ಕೂಡಿಸಿದರು

'ಓ! ಅಗತ್ಯವಾಗಿ' ಎಂದ ಚಂದ್ರಶೇಖರ

ಇಷ್ಟುಹೊತ್ತಿಗೆ ಅವರು ಚಂದ್ರಶೇಖರನ ಮನೆಯ ಬಳಿಗೆ ಬಂದರು. ಅವರ ಮನೆಯ ಮುಂದೆ ಜನರ ಗುಂಪು ಸೇರಿತ್ತು. ಚಂದ್ರಶೇಖರನಿಗೆ ಇದನ್ನು ಕಂಡು ಆಶ್ಚರ್ಯ – ಗಾಬರಿ ಎರಡೂ ಉಂಟಾದವು 'ಇದೇನು ಮೇಷ್ಟರೆ, ಈ ಗುಂಪು?' ಎಂದ. ಅವರಿಗೂ ಅರ್ಥವಾಗಲಿಲ್ಲ. ಹತ್ತಿರಕ್ಕೆ ಬಂದು ನೋಡಿದಾಗ ಎಲ್ಲರ ವದನದ ಮೇಲೂ ನಗೆ ಮೂಡಿತ್ತು. ಎಲ್ಲರೂ ಅವನತ್ತಲೇ ನೋಡುತ್ತಿದ್ದರು. ಚಂದ್ರಶೇಖರ ಊರಿಗೆ ಬಂದ ಸಮಾಚಾರ ಕೇಳಿ ಅವನನ್ನು ನೋಡಲು ಬಂದಿದ್ದ ಊರ ಜನ ಅವರು ಹಳ್ಳಿಯ ಮುಗ್ಧ ಜನ ತನ್ನಲ್ಲಿಟ್ಟಿದ್ದ ಪ್ರೀತಿಗಾಗಿ ಚಂದ್ರಶೇಖರ ಕೃತಜ್ಞತೆಯಿಂದ ಬಾಗಿ ಹೋದ.

ಚಂದ್ರಶೇಖರನನ್ನು ಮೊದಲು ಮಾತಾಡಿಸಿದವರು ಶ್ಯಾನು ಭೋಗರು. 'ಚೆನ್ನಾಗಿದೀಯಾ ಚಂದ್ರ?' ಎಂದರು.

'ಏನೋ ಹೀಗಿದೇನೆ' ಎಂದ ಚಂದ್ರಶೇಖರ.

'ಬಹಳ ಸಂತೋಷಾಪ್ಪ. ನಮ್ಮ ಗೌಡರ ಮಗನಾಗಿ ಹುಟ್ಟಿದ್ದಕ್ಕೆ ಕೊನೇಗೂ ಒಂದು ಘಟ್ಟ ಮುಟ್ಟಿದೆಯಲ್ಲ. ಇನ್ನೇನು ನಾಳೆ ಪ್ರೊಬೇಷನ ಗಿರಿ ಆಗಿ ನಮ್ಮ ಮೇಲೇ ಜಮಾಬಂದೀಗೆ ಬರ್ತೀಯೆ. ಮರೀಬೇಡಾಪ್ಪ ಬಡವರ್ನ' ಎಂದರು

'ಅಂಥ ಅಧಿಕಾರ ನನಗೆ ಬೇಡ ಶಾನುಭೋಗ್ರೆ. ನಾ ಈ ಊರಲ್ಲೇ ಇದ್ದು ಬಿಡೋಣ ಎಂತ ಇದೇನೆ.'

'ಹೌದೇನಯ್ಯ? ಇದೇನಯ್ಯ ಹುಚ್ಚು? ರೂಪಾಯನ್ನ ನೀರಿನ ಹಾಗೆ ಚೆಲ್ಲಿ ನಿಮ್ಮಪ್ಪ ಓದಿಸಿದ್ದಕ್ಕೆ ಸಾರ್ಥಕವಾಯಿತು. ನೋಡಿದಿರಾ ಪಟೇಲರೆ?'

ಪಟೇಲರು ಮೆಲ್ಲಗೆ ನಕ್ಕು ಸಮ್ಮನಾದರು. ಅವರೇನು ಹೇಳುವ ಹಾಗೂ ಇರಲಿಲ್ಲ.

'ನಮ್ಮಂಥಾ ಕಲಿತವರು ನಮ್ಮ ದೇಶದಲ್ಲಿ ಇರೋದೇ ಅಪುರೂಪ. ನೂರಕ್ಕೆ ಒಬ್ಬರಿಬ್ಬರು ನಮ್ಮ ಹಾಗಿದ್ದರೆ ಉಳಿದವರು ಅಜ್ಞಾನದಲ್ಲೆ ಇದಾರೆ. ಅವರ ಸಾಲ ನಮ್ಮ ಈ ವಿದ್ಯೆ. ಅದನ್ನ ಅವರಿಗೂ ಕೊಡ ಬೇಕಾದಂಥ ಕಾಲ ಬಂದಿದೆ. ಅದಕ್ಕೋಸ್ಕರ ನಾ ಇಲ್ಲೇ ಇರ್ತೇನೆ.'

ಶಾನುಭೋಗರು ಒಮ್ಮೆ ಗೌಡರ ಮುಖ ನೋಡಿದರು. ಅವರ ಮುಖದ ಮೇಲೆ ಯಾವ ಭಾವವೂ ಇರಲಿಲ್ಲ ಆದ್ದರಿಂದ ಗೌಡರು ತಮ್ಮ ಮಗನ ಈ ಅಭಿಪ್ರಾಯಕ್ಕೆ ಸಮ್ಮತಿ ಇತ್ತಿದ್ದರೋ ಇಲ್ಲವೋ ಶಾನುಭೋಗ ರಿಗೆ ಗೊತ್ತಾಗಲಿಲ್ಲ. ಕೊನೆಗೆ,—

'ಹೌದಾ? ಅದೇನೋಪ್ಪ, ನಂಗೆ ಗೊತ್ತಿಲ್ಲ. ಈ ಹಳ್ಳಿಯ ಜನಕ್ಕೆ ಸುಧಾರಣೆ ಮಾಡೋದೂ ಒಂದೇ, ಸಮುದ್ರದಲ್ಲಿ ಹುಣಿಸೇಹಣ್ಣು ಕದ ರೋದೂ ಒಂದೇ. ಅಂತೂ ಊರು ಬಿಟ್ಟು ಹೋಗದೇ ನಿಮ್ಮಂಥಾವರು ನಮ್ಮ ಮಧ್ಯಾನೇ ಇದ್ದರೆ ನಮಗೂ ಎಷ್ಟೋ ಹೆಮ್ಮೆ. ಬರ್ತೇನಯ್ಯ. ಬರ್ತೇನೆ ಗೌಡರೆ' ಎಂದು ಹೇಳುತ್ತಾ ಶಾನುಭೋಗರು ಹೊರಟರು. ಉಳಿ ದವರನ್ನೂ ಚಂದ್ರಶೇಖರ ಯೋಗ್ಯವಾಗಿ ಮಾತಾಡಿಸಿ ಕಳಿಸಿದ. ಕೊನೆ ಯಲ್ಲಿ ಉಳಿದವನು ತನ್ನ ಭಾವ, ಗಂಗೂನ ಗಂಡ, ಕೆಂಪಣ್ಣ. ಕೆಂಪಣ್ಣ

ಚಿಕ್ಕಂದಿನಲ್ಲಿ ಚಂದ್ರಶೇಖರನ ಜತೆಯಲ್ಲೆ ಓದಿದವನು. ಆದ್ದರಿಂದ ಗೆಳೆತನದ ಸಲಿಗೆ ಭಾವನಂಟಿನ ಹಾಲಿಗೆ ಸಕ್ಕರೆ ಬೆರಸಿದ ಹಾಗಿತ್ತು.

'ಏನು ಭಾವಯ್ಯ, ಚೆನ್ನಾಗಿದೀಯಾ?'

'ಏನೋ ಹೀಗಿದೀನಿ ಚಂದ್ರಾ.'

ಚಂದ್ರಶೇಖರ ತನ್ನ ಸವಿಗನಸನ್ನೆಲ್ಲ ಅವನಲ್ಲಿ ವಿಸ್ತರಿಸಿದ. ಮುಂದೆ ತಾನು ಮಾಡಬೇಕೆಂದಿದ್ದ ಕೆಲಸ, ಅದಕ್ಕೆ ಊರಿನ ಯುವಕರು ಸಹಾಯ ಮಾಡಬೇಕಾದ್ದರ ಅಗತ್ಯ—ಎಲ್ಲವನ್ನೂ ಹೇಳಿದ ಕೆಂಪಣ್ಣನದು ಬಹು ತಿಳಿಯಾದ ಮನಸ್ಸು. ಅವನಿಗೆ ಹೇಳಿದ್ದಕ್ಕೆ ಮರುತ್ತರ ಕೊಡಲು ಬಾರದು. ಒಲಿದವರಿಗೆ ಬದಲಿಲ್ಲದೆ 'ಹೂಂ' ಎನ್ನುವುದೇ ಅವನ ಸ್ವಭಾವ 'ಆಗಲಿ' ಎಂದ.

'ಅಣ್ಣಯ್ಯ, ಸ್ವಲ್ಪ ಒಳಗೆ ಬಾರೋ' ಎಂದಳು ಗಂಗೂ.

ತಾನು ಇನ್ನೂ ಮುಖ ತೊಳೆದಿರಲಿಲ್ಲವೆಂಬುದರ ಅರಿವು ಆಗ ಚಂದ್ರಶೇಖರನಿಗಾಯಿತು.

'ನೀನೂ ಬಾ, ಭಾವಯ್ಯ. ನಿನ್ನ ಹೆಂಡತಿ ಕರೀತಾ ಇದಾಳೆ. ಏನೋ ಸ್ವಾರಸ್ಯ ಇರಬೇಕು. ನಾನು ಒಂದು ಗಳಿಗೇಲಿ ಮೊಕ ತೊಳ ಕೊಂಡು ಬಂದು ಬಿಡ್ತೇನೆ' ಎಂದ, ಚಂದ್ರ

ಏನನ್ನೋ ನೆನೆದು ನಗುತ್ತ ಭಾವಯ್ಯನೂ ಒಳಗೆ ಹೋದ.

೫

ಅವೊತ್ತು ಮಧ್ಯಾಹ್ನ ಸ್ಕೂಲಿನಲ್ಲಿ ಊರಿನ ಯುವಕರ ಸಭೆ ಸೇರಿತ್ತು. ಪಹರಿನಲ್ಲಿ ಬಿ ಎ. ಓದಿ ಊರಿಗೆ ಬಂದಿದ್ದ ಚಂದ್ರಶೇಖರ ಸಭೆ ಕರೆದ ಮೇಲೆ ಅವನ ಎಳತನದ ಗೆಳೆಯರು ಬರದೇ ಇದ್ದಾರೆ? ಎಲ್ಲರೂ ಕೂಡಿದ್ದರು. ಅವೊತ್ತಿನ ಸಭೆಗೆ ನರಸಿಂಹಯ್ಯನವರು ಅಧ್ಯಕ್ಷ ರಾಗಬೇಕೆಂದು ಚಂದ್ರಶೇಖರ ಸೂಚಿಸಿದ. ನರಸಿಂಹಯ್ಯ ಮೊದಲು ಒಪ್ಪಲಿಲ್ಲ. ಆದರೆ ಕೊನೆಗೆ ಬಲವಂತಕ್ಕೆ ಕಟ್ಟುಬಿದ್ದು ಒಪ್ಪಬೇಕಾಯಿತು. ಆ ಸಭೆಯಲ್ಲಿ ನರಸಿಂಹಯ್ಯನವರೂ ಚಂದ್ರಶೇಖರನೂ ವಿಷಯವನ್ನೆಲ್ಲ

ಸೂಕ್ಷ್ಮವಾಗಿ ವಿವರಿಸಿದರು. ಅವೆಲ್ಲ ಸತ್ಯದ ಸಂಗತಿಯೇ ಆದ್ದರಿಂದ ಯಾರೂ ಬದಲಾಡಲಿಲ್ಲ ಅವರಲ್ಲೇ ಎಷ್ಟೋ ಜನರನ್ನು ರೋಗ ಪೀಡಿಸುತ್ತಾ ಇತ್ತು. ಇನ್ನು ಎಷ್ಟೋ ಮಂದಿ ಅವಿದ್ಯೆಯ ತವರು. ಚಂದ್ರಶೇಖರನ ಭವ್ಯವಾದ ಕನಸಿನ ಮಂದಿರ ಕಂಡು ತಲೆದೂಗಿದರು ಆದರೆ ಈ ಕನಸು ನನಸಾಗುವುದೇ ಎಂಬುದು ಅವರಲ್ಲಿ ಅಷ್ಟಾಗಿ ನಂಬಿಕೆಯಿರಲಿಲ್ಲ ಆದರೂ ಅಂಥ ಓದಿದವನೇ ಊರಿಗಾಗಿ ಎಲ್ಲಾ ತ್ಯಾಗಮಾಡಲು ಸಿದ್ಧನಿರುವಾಗ ತಾವು ಹಿಂದೆಗೆಯುವುದು ಚೆನ್ನಲ್ಲವೆಂದು ಬಗೆದರು ಅಂದೇ ಒಂದು ವಯಸ್ಕರ ಶಿಕ್ಷಣ ಶಾಲೆ ಆರಂಭವಾಯಿತು. ಒಂದು ವಾಚನಾಲಯ ಸ್ಥಾಪಿತವಾಯಿತು. ಅದಕ್ಕೆ ಚಂದ್ರಶೇಖರನೇ ತನ್ನಲ್ಲಿದ್ದ ಕೆಲವು ಪುಸ್ತಕ ಕೊಟ್ಟ. ಇನ್ನು ಮೇಲೆ ಊರು ಚೊಕ್ಕಟವಾಗಿಡುವ ಕೆಲಸ ತಮಗೇ ಸೇರಿದ್ದೆಂದೂ ಪ್ರತಿ ಸೋಮವಾರವೂ ಊರೊಟ್ಟಿನ ಕಾರ್ಯಕ್ಕಾಗಿ ಮೀಸಲಿಡಬೇಕೆಂದೂ ತೀರ್ಮಾನಿಸಿದರು. ಊರಿನ ಪಂಚಾಯಿತಿಯಲ್ಲಿ ಕೂಡಿದ್ದ ಹಣದ ಜತೆಗೆ ಸರ್ಕಾರದಿಂದಲೂ ಹಣ ಪಡೆದು ಕೆರೆಯಂಗಳ ಶೋಧಿಸಿ ಹೆಚ್ಚು ನೀರು ನಿಲ್ಲುವ ಹಾಗೆ ಮಾಡಬೇಕೆಂದೂ ಇದಕ್ಕಾಗಿ ಊರಿನ ಪಂಚಾಯಿತಿಯನ್ನು ಕೇಳಿಕೊಳ್ಳಬೇಕೆಂದೂ ತೀರ್ಮಾನವಾಯಿತು. ಊರಿನ ಸುತ್ತ ನೀರು ನಿಂತೆಡೆಯಲ್ಲೆಲ್ಲ ಸೀಮೆಎಣ್ಣೆ ಹಾಕಿ ಸೊಳ್ಳೆ ಸೇರದ ಹಾಗೆ ಇಡಬೇಕೆಂದೂ ಚಂದ್ರಶೇಖರ ಸೂಚಿಸಿದ ಅಲ್ಲಿ ಸೇರಿದ್ದವರೆಲ್ಲ ತರುಣರಾದ್ದರಿಂದ ತಾರುಣ್ಯದ ಹುರುಪಿನಿಂದ ಎಲ್ಲ ಸೂಚನೆಗೂ 'ಹೂ' ಎನ್ನುತ್ತಿದ್ದರು ಚಂದ್ರಶೇಖರನಿಗೂ ಈ ಎಲ್ಲ ಕಾರ್ಯಗಳ ಕಷ್ಟದ ಅರಿವು ಅಷ್ಟೊಂದು ಮನಸ್ಸಿಗೆ ತಾಕಲಿಲ್ಲ. ಆದ್ದರಿಂದ ಈ ಎಲ್ಲ ಸೂಚನೆಗಳೂ ಒಮ್ಮೆಯೇ ಕಾರ್ಯರೂಪಕ್ಕೆ ಬರಲಿಲ್ಲ ಬಹು ನಿದಾನವಾಗಿ ಮುನ್ನಡೆಯಬೇಕಾಗಿತ್ತು ಸ್ಕೂಲು ಕಟ್ಟಡದಲ್ಲಿ ದಿನದಿನದ ಕೆಲವು ರೋಗಗಳಿಗಾಗಿ ಸುಲಭ ಮದ್ದುಗಳನ್ನು ಚಂದ್ರಶೇಖರ ಶೇಖರಿಸಿಟ್ಟು ತಾನೇ ಉಚಿತ ಚಿಕಿತ್ಸೆ ಮಾಡಲಾರಂಭಿಸಿದ. ಇದರಿಂದ ಎಷ್ಟೋ ಕಾಯಿಲೆಗಳು ಗುಣವಾದವು ಮೊದಮೊದಲು ಈ ಕಾರ್ಯದ ನಿರರ್ಥಕತೆಯನ್ನು ಬಗೆದು ಊರಿನ ಹಲವರು ಒಳಗೊಳಗೇ ನಗುತ್ತಿದ್ದರು ಗೌಡರ ಮಗನಾದ್ದರಿಂದ ಎದುರಿಗೆ ಹಾಗೆ ಹೇಳುತ್ತಿರಲಿಲ್ಲ ಆದರೆ ದಿನ ಸಂದಂತೆ

ಬಹು ನಿದಾನವಾಗಿ ಅವರು ತಮ್ಮ ಅಭಿಪ್ರಾಯ ತಿದ್ದಿಕೊಳ್ಳಬೇಕಾಯಿತು. ಹೀಗೆ ಚಂದ್ರಶೇಖರನ ಕಾರ್ಯ ಸ್ವಲ್ಪಸ್ವಲ್ಪವಾಗಿ ಯಶಸ್ವಿಯಾಗ ತೊಡಗಿತ್ತು. ಆದರೆ ಮಾಡಬೇಕಾದ ಕೆಲಸ ಅಗಾಧವಾಗಿತ್ತು.

ಇತ್ತ ಪಟೇಲ ಚಿನ್ನಯ್ಯ ಇದನ್ನೆಲ್ಲಾ ಕಂಡು ಸಹಿಸಲಿಲ್ಲ ಹೆಚ್ಚು ಕಡಮೆ ಚಂದ್ರಶೇಖರನ ಓರಗೆಯವನೇ ತಾನು. ತನ್ನನ್ನೂ ಓದಿಸ ಬೇಕೆಂದು ಮಾವ ಪ್ರಯತ್ನಪಟ್ಟ ಆದರೆ ಆ ಕಡೆ ಅವನ ತಲೆ ಓಡದೆ ಶಾಲೆಯಿಂದ ಹಿಂದಿರುಗಿದ ಮಾವಯ್ಯ ತಕ್ಕ ಮುತುವರ್ಜಿ ವಹಿಸಲಿಲ್ಲ ವೆಂದೂ ಇಂದು ಸುಬ್ಬಯ್ಯಗೌಡರ ಮೇಲೆ ಹಚ್ಚು ವಿಷ ಕಾರತೊಡಗಿದ ಏನೋ ಶನಿ ಬಂದು ಒಂದೆರಡು ದಿನವಿದ್ದು ಆಮೇಲೆ ಯಾವುದೋ ಕೆಲಸ ಹುಡುಕಿಕೊಂಡು ಹೋಗುತ್ತದೆ ಎಂದುಕೊಂಡಿದ್ದರೆ ಚಂದ್ರಶೇಖರ ಬಲ ವಾಗಿಯೇ ಬೇರೂರುತ್ತಿದ್ದ ಅವನು ಗಳಿಸುತ್ತಿದ್ದ ಜನಾನುರಾಗ ಚಿನ್ನಯ್ಯನ ಮತ್ಸರ ಇನ್ನೂ ಹೆಚ್ಚಲು ಕಾರಣವಾಯಿತು. ಆದ್ದರಿಂದ ಹೇಗಾದರೂ ಮಾಡಿ ಅವನ ಮೇಲೆ ಹಟ ಸಾಧಿಸಬೇಕೆಂದು ಸಮಯ ಕಾಯುತ್ತಾ ಇದ್ದ. ತನ್ನ ತಂಗಿಯನ್ನು ಅವನಿಗೆ ತಂದುಕೊಳ್ಳಬೇಕೆಂದಿ ದ್ದದ್ದೂ ಅದಕ್ಕೆ ಚಂದ್ರಶೇಖರನೂ ಇಷ್ಟಪಟ್ಟದ್ದೂ ಚಿನ್ನಯ್ಯನಿಗೆ ಗೊತ್ತಿ ಲ್ಲದೆ ಇರಲಿಲ್ಲ. ಆ ಮಾತು ಬಂದಾಗ ಚೆನ್ನಾಗಿ ಹಂಗಿಸೋಣವೆಂದು ಸಮಯ ಕಾಯುತ್ತಾ ಇದ್ದ.

ಚಂದ್ರಶೇಖರ ಬಂದ ಮರುದಿನ ಲಕ್ಕವ್ವನೂ ಅವರ ಮನೆಗೆ ಬಂದಿ ದ್ದಳು. ಅವಳ ಜತೆಯಲ್ಲಿ ಚೆನ್ನಮ್ಮನೂ ಬಂದಿದ್ದಾಳೇನೋ ಎಂದು ಚಂದ್ರಶೇಖರ ನಿರೀಕ್ಷೆಯ ಕಣ್ಣು ಹರಿಯಬಿಟ್ಟ. ಆದರೆ ಅವಳು ಬಂದಿರ ಲಿಲ್ಲ. ‘ಚಂದ್ರೂನ್ನ ನೋಡಿಕೊಂಡು ಬರೋಣ ಬರ್‍ತೀಯೇನೇ?’ ಎಂದು ಲಕ್ಕವ್ವ ಹೊರಡುವಾಗ ಕೇಳಿದ್ದಳು. ಅದಕ್ಕೆ ಚೆನ್ನಮ್ಮ ‘ಹೂ’ ಎಂದು ನಾಚಿಕೆಯಿಂದ ಹೇಳಿದ್ದಳು. ಹೋಗಬೇಕೆಂದು ಅವಳ ಹೃದಯ ತುಟಿದುಕೊಳ್ಳುತ್ತಿತ್ತು. ಆದರೂ ಅದನ್ನು ತೋರಗೊಡದೆ ಅರಮನಸ್ಸಿ ನವಳಂತೆ ಸಿಂಗಾರ ಮಾಡಿಕೊಳ್ಳತೊಡಗಿದಳು. ಆದರೆ ಅಲ್ಲೇ ಇದ್ದ ಚಿನ್ನಯ್ಯ ನಡುವೆ ಬಾಯಿ ಹಾಕಿ,—

'ಚೆನ್ನಿ ಯಾಕೆ ಅಲ್ಲೀಗೆ? ಅಲ್ಲೇನು ಕೋತಿ ಕುಣೀತದಾ? ಏನು ಮಹಾರಾಜ ಬಂದವನೆ ಅಂತ ಅವನಿಗೆ ನಜರ್ ಒಪ್ಸೋಕೆ ಹೋಗ ಬೇಕೇನೋ! ನೀನಂತೂ ಅಣ್ಣನ ಮಗ ಅಂತ ಹೋಗ್ತೀಯೆ. ನಮಗೆ ಮಾಡಿರೋ ಅವಮಾನ ಏನಾದರೂ ನಿಂಗೆ ಗೊತ್ತಾಗ್ತದಾ?' ಎಂದಿದ್ದ.

ಲಕ್ಕವ್ವ, ಹೋಗ್ಲಿ ಬಿಡೋ. ಧರ್ಮರಾಯನಂತಾ ಮನುಸ್ರು. ಅವರನ್ನ ಬೆಳಗ್ಗೆ ಎದ್ದು ಹೀಗೆಲ್ಲ ನಿಷ್ಠೂರ ಮಾಡಬಾರದು ನಿಂಗೆ ಇಷ್ಟ ಇಲ್ಲದಿದ್ರೆ ಸುಮ್ಮನೆ ಇರು. ಹಿಂಗೆಲ್ಲಾ ಅನ್ನಬೇಡ' ಎಂದಳು

ಅಣ್ಣ ಆಡಿದ ಮಾತು ಕೇಳಿ ಚೆನ್ನಮ್ಮನ ಉತ್ಸಾಹಕ್ಕೆ ತಣ್ಣೀರೆರಚಿದ ಹಾಗಾಗಿತ್ತು. ಲಕ್ಕವ್ವ,

ಬೇಡ ಬಿಡವ್ವ. ಯಜಮಾನ ಕಟ್ಟಪ್ಪಣೆ ಮಾಡಿರೋವಾಗ ನೀ ಯಾಕೆ ಬರಬೇಕು? ನಾ ಹೋಗಿ ನೋಡಿಕೊಂಡು ಬರ್ತೇನಿ. ನನ್ನೇನೂ ಅವನು ತಡೀಲಾರ. ಅಣ್ಣನ ಮಗ ಅನ್ನೋ ವಾಂಛಲ್ಯ ಇವನಿಗೋಸ್ಕರ ಬಿಡೋಕಾದಾತಾ?' ಎಂದಳು.

ಚೆನ್ನಮ್ಮ ಬರದಿದ್ದದ್ದು ನೋಡಿ ಚಂದ್ರಶೇಖರ ಎರಡು ಮೂರು ಸಲ,

'ಮನೇಲೆಲ್ಲಾರೂ ಚೆಂದಾಗಿದಾರಾ ಅತ್ತೆಮ್ಮ?' ಎಂದು ಕೇಳಿದ.

'ಎಲ್ಲಾ ಚೆಂದಾಗವ್ರೆ' ಎಂದು ಹೇಳಿದಳು ಲಕ್ಕವ್ವ.

ಚಾಣಾಕ್ಷಳಾದ ಗಂಗೂ ಅವನ ಮನಸ್ಸು ತಿಳಿದುಕೊಂಡು,

'ಚೆನ್ನಿ ಯಾಕೆ ಬರಲಿಲ್ಲಾ ಅಂತ ಅಣ್ಣಯ್ಯಂಗೆ ಯೋಚನೆ' ಎಂದಳು.

'ನೀ ಯಾಕೆ ನಮ್ಮ ಮಾತಿನಲ್ಲಿ ಬಾಯಿ ಹಾಕ್ತೀಯೇ?' ಎಂದ ಚಂದ್ರ, ಹುಸಿ ಮುನಿಸಿನಿಂದ.

'ನಿನ್ನ ಯಾರೋ ಮಾತಾಡಿಸಿದವರು?' ಎಂದು ಗಂಗೂ ಮರು ಬಾಣ ಬಿಟ್ಟಳು.

'ಅಯ್ಯೋ, ಏನೋ ಕೆಲಸ ಇತ್ತು. ಮನೇಲೆಲ್ಲಾರೂ ಬಂದ್ರೆ ಆದೆಂಗಾಯ್ತುದೆ? ಅದೂ ಅಲ್ಲದೆ ಮನೇ ಯಜಮಾನ ಬೇರೆ ಅವನಲ್ಲಮ್ಮ.

ಚಂದ್ರಾನೇ ಸಂಜೆಗುಂಟ ಹಂಗೇ ಬಂದುಹೋಗಲಿ. ನನ್ಮ ಹುಡುಗನ್ನೂ ಮಾತಾಡಿಸಿದಂಗಾಗ್ತದೆ. ಊರಿನೋರನೆಲ್ಲಾ ಮಾತಾಡಿಸಿದ. ನನ್ನ ಇದ್ದೆಯಾ ಸತ್ತೆಯಾ ಅಂತ ಕೇಳಲಿಲ್ಲ, ಅನ್ನೋ ಮಾತು ಯಾಕೆ?'

ಅವತ್ತು ಸಂಜೆ ಅಡ್ಡಾಡುತ್ತಾ ಚಂದ್ರಶೇಖರ ಅವರ ಮನೆಗೆ ಹೋದ. ಜಗಲಿಯ ಮೇಲೇ ಚಿನ್ನಯ್ಯ ಕುಳಿತಿದ್ದ.

'ಚೆಂದಾಗಿದೀಯಾ ಚಿನ್ನಣ್ಣ?'

'ಹೂಂ' ಎಂದಷ್ಟೇ ಹೇಳಿದ ಚಿನ್ನಯ್ಯ

ಲಕ್ಕವ್ವನ ಸಂತೋಷಕ್ಕೆ ಮೇರೆಯೇ ಇಲ್ಲ ಇಂಥ ವಿದ್ಯಾವಂತ ಅಭಿಮಾನದಿಂದ ತನ್ನ ಮನೆ ತನಕ ಬಂದನಲ್ಲ—ಎಂತ ಅವಳ ಹೆಮ್ಮೆ. ಚೆನ್ನಿಯಂತೂ ಮಧ್ಯಾಹ್ನವೆಲ್ಲಾ ಸಿಂಗಾರವಲ್ಲೇ ಕಾಲ ಕಳೆದಿದ್ದಳು ಆದರೆ ಚಂದ್ರಶೇಖರ ಕುಳಿತಿದ್ದ ನಡುಮನೆಯೊಳಕ್ಕೆ ಕಾಲು ಹಾಕಲಿಲ್ಲ ಚಿನ್ನಯ್ಯನ ಹೆಂಡತಿಯಂತೂ ಏನೂ ಅರಿಯದ ಮುಗ್ಧೆ. ಅತ್ತೆಯ ಮಾತು ಮೀರುತ್ತಿರಲಿಲ್ಲ. ಲಕ್ಕವ್ವ ಎರಡು ಮೂರು ಸಲ, 'ಚೆನ್ನೀ ಇಲ್ಲಿ ಬಾರೇ' ಎಂದು ಕೂಗಿ ಹೇಳಿದ್ದಳು. ಆದರೂ ಅವಳು ಹೊಸಲು ದಾಟ ಒಳಗೆ ಬರಲಿಲ್ಲ. ಮಗಳ ನಾಚಿಕೆ ಕಂಡು ತಾಯಿ ಒಳಗೊಳಗೇ ನಗುತ್ತಿದ್ದಳು.

'ಮತ್ತೆ, ಮಧ್ಯಾಹ್ನಾನೆಲ್ಲಾ ಚಂದ್ರಾ ಬರ್ತಾನೆ ಎಂತ ಸಿಂಗಾರ ಮಾಡ್ಕೊಂಡೆ' ಎಂದಳು ಲಕ್ಕವ್ವ.

ಚಂದ್ರಶೇಖರನಿಗಂತೂ ಲಕ್ಕವ್ವ ಆದರಿಸಿ ಕೊಡುತ್ತಿದ್ದ ತಿಂಡಿಯ ಮೇಲೆ ಗಮನವೇ ಇಲ್ಲ. ನಡುಮನೆಯ ಬಾಗಿಲತ್ತಲೇ ಕಣ್ಣು.

ಕೊನೆಗೆ ಲಕ್ಕವ್ವ, 'ತುಪ್ಪ ಎಲ್ಲಿ ಮಡಗಿದೀಯೇ ಚೆನ್ನಿ?' ಎಂದಳು.

'ಅಲ್ಲೇ ಮಾಡಿನ ಮೇಲೆ ಜಾಡೀಲಿದೆ.'

'ಎಲ್ಲೀ? ಸಿಕ್ಕಲೇ ಇಲ್ಲ.'

ಚೆನ್ನಿ ಮಾತಾಡಲಿಲ್ಲ.

'ಸ್ವಲ್ಪ ಹುಡುಕಿ ಕೊಡು ಬಾರೇ. ನಿನ್ನ ನಾಚಿಕೇಲಿ ಚಂದ್ರಂಗೆ ತುಪ್ಪ ಹಾಕದೇ ಕಳಿಸೋಕಾದಾತಾ'' ಎಂದು ಹುಸಿ ಸಿಡುಕಿನಿಂದ ನುಡಿದಳು

'ಅಲ್ಲೇ ಮಡಗಿದೆ, ಅಂದ್ರೇ!' ಎನ್ನುತ್ತಾ ಚೆನ್ನಿ ರಭಸದಿಂದ ಓಡಿಬಂದಳು ನಡುಮನೆ ದಾಟಿ ಅಡುಗೆ ಮನೆಯೊಳಕ್ಕೆ ಹೋಗುವಾಗ ಅವರಿಬ್ಬರ ಕಣ್ಣೂ ಒಂದು ಗಳಿಗೆ ಎರಡು ಮಿಂಚು ಸಂಧಿಸಿದ ಹಾಗೆ ನಾಟಿದವು. ಇಬ್ಬರ ಮೋರೆಯ ಮೇಲೂ ನಗೆಯು ಕಾಮನಬಿಲ್ಲು ಮಿನುಗುತ್ತಿತ್ತು.

ತುಪ್ಪದ ಜಾಡಿ ಮಾಡಿನ ಮೇಲೇ ಇತ್ತು

ಲಕ್ಕವ್ವ ಅಷ್ಟಕ್ಕೇ ಬಿಡಲಿಲ್ಲ, 'ಹೋಗಿ ಚಂದ್ರಂಗೆ ತುಪ್ಪ ಬಡಿಸಿ ಬಾ ಎಲ್ಲಾವಕ್ಕೂ ನಾನೇ ಓಡಾಡಬೇಕಾ?' ಎಂದಳು.

ಏನೋ ವಿಧಿಯುಲ್ಲದವಳಂತೆ ಚೆನ್ನಿ ಹೋಗಿ ತುಪ್ಪ ಬಡಿಸಿ ಬಂದಳು. ಆದರೆ ಸಂತೋಷದಿಂದ ಆಕೆಯ ಹೃದಯು ಗುಲಾಬಿಯು ಹಾಗೆ ಅರಳಿತ್ತು ತುಪ್ಪ ಬಡಿಸುವಾಗ ಚಂದ್ರನ ಕಣ್ಣು ಮಿಳ್ಳೆಯ ಮೇಲಿರಲಿಲ್ಲ ಮಿಳ್ಳೆ ಹಿಡಿದಿದ್ದ ಕೈಯಿಂದ ಮೇಲೇರಿ ಮುಖದ ಮೇಲೆ ನಾಟಿತ್ತು.

ಚಂದ್ರಶೇಖರ ಬಂದು ಹೋದ ಮೇಲೆ ಚಿನ್ನಯ್ಯ ಆಡಿಕೊಳ್ಳಲು ಇನ್ನೂ ಒಂದು ಕಾರಣ ದೊರಕಿತು 'ಘನಂದಾರ ಬಂದನಲ್ಲಾ. ಚೆಂದಾಗಿದೀಯಾ? ಅಂತ ಕೇಳಿ ಒಳಗೆ ಹೊರಟುಹೋದನೇ ಹೊರತು ಒಂದು ಗಳಿಗೆ ಮಾತಾಡಿಸಬಾರದಾಗಿತ್ತಾ'' ಎಂತ ದೂರಿದ

ಲಕ್ಕವ್ವ, 'ಬಿಡೋ ಬಲೇ ಚೆಂದಾಗದೆ. ಒಲ್ಲದ ಗಂಡಂಗೆ ಮೊಸರಿನಲ್ಲಿ ಕಲ್ಲು ಅಂತ ಸುಮ್ಮನೆ ತಪ್ಪೇ ಹಿಡಿದು ಮಾತಾಡ್ತೀಯೆ. ಅಂಥ ವಿಶ್ವಾಸ ಇದ್ದಿದ್ರೆ ನೀನು ಸರಿಯಾಗಿ ಮಾತಾಡಬಾರದಾಗಿತ್ತಾ? ಅವನೇ ಮೊದಲು ಚೆಂದಾಗಿದ್ದೀಯಾ? ಅಂತ ಕೇಳಲಿಲ್ಲವಾ?' ಎಂದಳು.

ಚಿನ್ನಯ್ಯನಿಗೆ ಅದಕ್ಕೆ ಉತ್ತರ ಹೇಳಲು ತೋಚಲಿಲ್ಲ. 'ಇನ್ಮೇಲೆ ನಿನ್ನತಾವು ಮಾತಾಡಲೇಬಾರ್ದು' ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಹೋದ

ಒಂದು ದಿನ ಸಂಜೆ ಚಂದ್ರಶೇಖರ ತಿರುಗಾಡಿಕೊಂಡು ಮನೆ ಕಡೆ ಬರುತ್ತಾ ಇದ್ದ ಹುಚ್ಚುಗಾಳಿ ಬೀಸಿ ಆಗಸದ ತುಂಬ ತುಂಡು ಮೋಡ ಚೆಲ್ಲಾಪಿಲ್ಲಿಯಾಗಿ ಹಾರುತ್ತಿದ್ದವು. ಮೋಡ ಆರೀತಿ ಗೊತ್ತುಗುರಿಯಿಲ್ಲದೆ ಓಡುತ್ತಿದ್ದದ್ದು ನೋಡಿ ಚಂದ್ರಶೇಖರನ ಮನಸ್ಸು ಪ್ರಕ್ಷುಬ್ಧವಾಯಿತು. ಆ ಮೋಡದ ಹಾಗೆ ಸ್ವಚ್ಛಂದ ಅವನ ಪ್ರವೃತ್ತಿ. ಬೀಸುವ ಗಾಳಿಯಲ್ಲಿ, ಅಲೆಯುವ ಮೋಡದಲ್ಲಿ ಮನೆಮಾಡಿಕೊಂಡಿದ್ದ ಅತೃಪ್ತಿಯೇ ಅವನ ಹೃದಯದಲ್ಲೂ ನೆಲಸಿತ್ತು.

ತಾನು ಮೊದಲು ತಿಳಿದಿದ್ದಷ್ಟು ಸುಲಭವಾಗಿರಲಿಲ್ಲ ಹಳ್ಳಿಯ ಜೀರ್ಣೋದ್ಧಾರ ಕಾರ್ಯ ತಾನು ಮೊದಲು ಮಾಡಿದ ವ್ಯಾಯಾಮಶಾಲೆಗೇನೋ ಸಾಕಷ್ಟು ಯುವಕರು ಉತ್ಸಾಹದಿಂದ ಬರುತ್ತಾ ಇದ್ದರು. ಆದರೆ ಊರ ಹಿರಿಯರಲ್ಲಿ ಇದರತ್ತ ಉದಾಸೀನ ಭಾವವೇ ನೆಲಸಿತ್ತು. ಕಿರಿಯರು ಮಾಡುವ ಎಲ್ಲ ಕೆಲಸದಲ್ಲೂ ಅವರು ಸಂಶಯವನ್ನೇ ತೋರುತ್ತಿದ್ದರು. ಆದರೆ ಚಂದ್ರಶೇಖರನ ಕಾರಣಯುತವಾದ ಮಾತಿಗೆ ಪ್ರತಿ ಹೇಳಲು ಅವರಿಗೆ ಸಾಧ್ಯವಿರಲಿಲ್ಲ. ಅಂತೂ ಹಾಗೆ ಹೀಗೆ ಮಾಡಿ ಹಳ್ಳಿಯ ನೈರ್ಮಲ್ಯಕಾರ್ಯ ಮುಂದುವರಿಸಿದ್ದ. ಊರ ಮುಂದಿನ ತಿಪ್ಪೆಗುಂಡಿಯೂ ಆಳವಾದ ಗುಂಡಿಯೊಳಗೆ ಸೇರುವ ಹಾಗಾಯಿತು. ಆದರೆ ಬಡತನ ಹಿಂಗುವ ಪರಿ ಹೇಗೆ? ಊರಲ್ಲಿ ಪಾರ್ಟಿ ಬೇರೆ. ಚಿನ್ನಯ್ಯನ ಕಡೆಯ ಜನ ಸೇರಿಕೊಂಡು ಚಂದ್ರಶೇಖರನ ಮೇಲೂ ಅವನ ತಂದೆಯ ಮೇಲೂ ಏನೇನೋ ಅಪಪ್ರಚಾರ ಮಾಡಿ ಊರನ್ನು ಇಬ್ಭಾಗ ಮಾಡಿದ್ದರು. ಸುಬ್ಬಯ್ಯಗೌಡರ ವಿರೋಧ ಪಕ್ಷದ ಜನ ಅಷ್ಟು ಹೆಚ್ಚು ಮಂದಿ ಇಲ್ಲದಿದ್ದರೂ ಊರಲ್ಲಿ ಒಡಕುಂಟಾಗಿತ್ತು. ಮಾತೆತ್ತಿದರೆ ಕೋರ್ಟಿಗೆ ಹೋಗುವುದು ಮೊದಲಾಯಿತು. ಸಾಲದ್ದಕ್ಕೆ ಚಿನ್ನಯ್ಯನ ಹಣದ ಪ್ರಲೋಭನಕ್ಕೆ ಎಷ್ಟೋ ಜನ ಸಿಲುಕಿದ್ದರು. ಹೀಗೆ ಸಿಲುಕಿದ್ದವರು ಮರುಮಾತಿಲ್ಲದೆ ಅವನು ಹೇಳಿದ್ದಕ್ಕೆ ಹೂಗುಟ್ಟಬೇಕಾಯಿತು. ಯಾರಾದರೂ ಸಾಲ ಕೇಳುವುದೇ ತಡ, ಚಿನ್ನಯ್ಯ ಕೊಟ್ಟುಬಿಡುತ್ತಿದ್ದ.

ಅಂದು ಸಂಜೆ ಚಂದ್ರಶೇಖರ ಇದನ್ನೆಲ್ಲ ಯೋಚಿಸುತ್ತ ಬರುತ್ತಿದ್ದಾಗ ದೂರದಲ್ಲಿ ಎದುರಿಗೆ ಬರುತ್ತಿದ್ದ ವ್ಯಕ್ತಿಯೊಬ್ಬ ಮುಂದೆ ಸಂಧಿಸಿ

ಡೊಡನೆಯೇ 'ನಮಸ್ಕಾರ ಚಂದ್ರಪ್ಪ' ಎಂದ. ಚಂದ್ರಶೇಖರನಿಗೆ ಗುರುತು ಹತ್ತಲಿಲ್ಲ. ಅವನನ್ನು ದಿಟ್ಟಿಸಿ ನೋಡಿದ. ತೊಟ್ಟಿದ್ದೊಂದು ತೀರ ಹರಕು ಅಂಗಿ; ಅಷ್ಟೇ ಹರಿದಿದ್ದ ಚಡ್ಡಿ. ತಲೆ ಪರಟಾಗಿತ್ತು. ಕಣ್ಣು ಗುಳಿ ಬಿದ್ದಿತ್ತು; ಕಾಂತಿಹೀನವಾಗಿತ್ತು. ಕೈಕಾಲು ಹಂಚಿಕಡ್ಡಿ. ತೂರಾಡುತ್ತಾ ಬರುತ್ತಿದ್ದ.

'ನಮಸ್ಕಾರ' ಎಂದೇನೋ ಹೇಳಿದ ಚಂದ್ರಶೇಖರ. ಆದರೆ ಯಾರೆಂದು ನೆನಪು ಬರಲಿಲ್ಲ.

'ನೆಪ್ಪಿಲ್ವಾ? ನಿಂ ತಿಮ್ಮ ಅಲ್ವಾ ನಾನು?'

ಆಗ ಚಂದ್ರಶೇಖರನಿಗೆ ಗುರುತು ಹತ್ತಿತು. ತಿಮ್ಮ ಅವನ ಚಿಕ್ಕಂದಿನ ಒಡನಾಡಿ. ಆಗವನು ಬಲು ಚೂಟಿಯಾಗಿದ್ದ. ಚಿಣ್ಣಿ ಕೋಲಿನಲ್ಲಿ ಅವನದು ಎಲ್ಲರದ್ದಕ್ಕಿಂತ ಮೇಲುಗೈ. ಮಾತೋ ಸುರಿಮಳೆ. ಉಣ್ಣುವುದಕ್ಕೂ ಉಡುವುದಕ್ಕೂ ತಕ್ಕಷ್ಟು ಆಸ್ತಿಯೂ ಇತ್ತು. ಅಂಥವನು ಈಗ ಗುರುತೇ ಸಿಕ್ಕದಷ್ಟು ವ್ಯತ್ಯಾಸವಾಗಿ ಹೋಗಿದ್ದ.

'ಇದ್ಯಾಕೆ ಹೀಗಿದ್ದೀ ತಿಮ್ಮ?' ಎಂದ ಚಂದ್ರಶೇಖರ. ಅವನ ಕಣ್ಣನ್ನೇ ಅವನು ನಂಬಲಿಲ್ಲ.

'ಅಯ್ಯೋ, ಅದೊಂದು ದೊಡ್ಡ ಕತೆ. ನಿನಗ್ಯಾಕೆ ಹೇಳಿ ಬೇಜಾರು ಪಡಿಸೋಣ' ಎಂದ.

ಆದರೆ ಚಂದ್ರಶೇಖರ ಬಿಡಲಿಲ್ಲ.

ತಿಮ್ಮನಿಗೂ ಹೇಳಬೇಕೆಂದು ತೋರಿತು. ತನ್ನ ದುಃಖ ತೋಡಿಕೊಂಡು ಹೃದಯ ಹಗುರ ಮಾಡಿಕೊಳ್ಳ ಬಯಸಿದ.

ತಿಮ್ಮ ಇನ್ನೂ ಚಿಕ್ಕವನಿರುವಾಗಲೇ ಅವನ ಅಪ್ಪ ತೀರಿಕೊಂಡ. ಆಮೇಲೆ ಹಾಗೂ ಹೀಗೂ ಬೆಳೆದ ಎರಡು ವರ್ಷದ ಹಿಂದೆ ಅವನಿಗೆ ಮದುವೆಯಾಯಿತು. ಅದಕ್ಕೆ ಬೇಕಾದ ಹಣಕ್ಕೆ ಇದ್ದ ತನ್ನ ಒಂದೇ ಹೊಲವನ್ನು ಚಿನ್ನಯ್ಯನಿಗೆ ಆಧಾರ ಮಾಡಿ ಹಣ ತೆಗೆದ. ಅದರಲ್ಲಿ ಒಂದು ವರ್ಷದ ಬಡ್ಡಿಯನ್ನು ಆಗಲೇ ಹಿಡಿದುಕೊಂಡು ಚಿನ್ನಯ್ಯ ಉಳಿದ ಹಣ

ಕೊಟ್ಟ. ಮದುವೆ ಮಾಡಿಕೊಂಡು ಹೆಂಡತಿ ಮನೆಗೆ ಬಂದಾಗ ಅವನ ಸಂತೋಷ ಹೇಳಿ ತೀರದು. ಆದರೆ ಬಂದ ಒಂದು ವರ್ಷದಲ್ಲೆ ಆತನ ಹೆಂಡತಿ ಹಡೆದು ತೀರಿಕೊಂಡಳು. ಮಗುವೂ ಹುಟ್ಟುತ್ತಲೇ ಕಣ್ಣು ಮುಚ್ಚಿತ್ತು. ಇತ್ತಲಾಗಿ ಜಮೀನಿನಿಂದ ಬಂದ ಫಸಲಿನ ಹಣ ಬಡ್ಡಿಗೇ ಆಗುತ್ತಿತ್ತು. ಈಗ ಅವನಿಗೂ ಗಡ್ಡೆ ಜ್ವರ ಬಂದು ಜಮೀನು ಕೆಲಸ ಮಾಡಲಾಗದೆ ಕಷ್ಟಕ್ಕೀಡಾಗಿದ್ದ. ಆದರೆ ಕೂಡಲೇ ಸಾಲ ಪಾವತಿ ಮಾಡದೆ ಇದ್ದರೆ ದಾವಾ ಮಾಡಿ ಜಮೀನು ವಶಪಡಿಸಿಕೊಳ್ಳುವುದಾಗಿ ಆಗ ತಾನೆ ಚಿನ್ನಯ್ಯ ಬೆದರಿಸಿ ಕಳಿಸಿದ್ದ . . . . .

'ಇನ್ನು ಜೀವನದಲ್ಲಿ ನಂಗೇನು ಸುಖಾ ಇದೆ ಚಂದ್ರಪ್ಪ' ಎಂದು ಕಣ್ಣೀರು ಸುರಿಸಿದ ತಿಮ್ಮ.

ಈ ಕತೆಯಿಂದ ಚಿನ್ನಯ್ಯನ ಕಾರ್ಯದ ಅರಿವಾಯಿತು ಚಂದ್ರ ಶೇಖರನಿಗೆ. ಹಾಗೆಯೇ ಸರಿಯಾದ ವೈದ್ಯ ಸೌಕರ್ಯವಿಲ್ಲದೆ ಹಳ್ಳಿಯ ಜನ ಪಡುವ ಕಷ್ಟದ ಅರಿವೂ ಆಯಿತು. ಅಂತೂ ದಿನೇ ದಿನೇ ತನ್ನ ಕಾರ್ಯ ಎಷ್ಟು ದುರ್ಗಮವಾಗಿದೆಯೆನ್ನುವುದೂ ಅವನ ಮನಸ್ಸಿಗೆ ವ್ಯಕ್ತವಾಯಿತು.

'ನನ್ನ ಜತೇಲಿ ಮನೇಗೆ ಬರ್ತಿಯಾ ತಿಮ್ಮ?'

'ಆಗಲಿ ಚಂದ್ರಪ್ಪ.'

ಚಂದ್ರಶೇಖರ ಮನೆಗೆ ಬಂದು ತಂದೆಗೆ ಎಲ್ಲಾ ಸಂಗತಿಯನ್ನೂ ತಿಳಿಸಿದ. ಹೇಗಾದರೂ ಮಾಡಿ ತಿಮ್ಮನ ಉದ್ಧಾರ ಮಾಡಬೇಕೆಂದು ತಂದೆಗೆ ಕೇಳಿಕೊಂಡ

'ಅಯ್ಯೋ, ಇವನೊಬ್ಬನಾದರೆ ಕನಿಕರ ತೋರಿಸಬಹುದು. ಆದರೆ ಇಂಥಾವರು ಎಷ್ಟು ಜನ ಅವನ ಕೈಲಿ ಸಿಕ್ಕಿದಾರೋ. ಈ ಜನಕ್ಕೆ ನಾ ಎಷ್ಟು ಹೇಳಿದರೂ ತಿಳಿಯೋದಿಲ್ಲ' ಎಂದರು, ಚಂದ್ರಶೇಖರನ ತಂದೆ.

'ಆದರೆ ಇವನೊಬ್ಬನ ಕಷ್ಟವನ್ನಾದರೂ ಬಿಡಿಸೋಣ.'

ಕೊನೆಗೆ ಇವನು ಚಿನ್ನಯ್ಯನಿಗೆ ಕೊಡಬೇಕಾದ ಹಣವನ್ನು ಸುಬ್ಬಯ್ಯಗೌಡರು ಕೊಡಬೇಕೆಂದೂ ಆ ಹಣಕ್ಕೆ ಅದೇ ಜಮೀನನ್ನು

ತಮ್ಮ ಹೆಸರಿಗೆ ಆಧಾರ ಮಾಡಿಕೊಂಡು ಅವನು ನಿದಾನವಾಗಿ ಹಣ ಪಾವತಿ ಮಾಡಲು ಅವಕಾಶ ಕೊಡಬೇಕೆಂದೂ ತೀರ್ಮಾನವಾಯಿತು.

ತಿಮ್ಮ ಎಲ್ಲ ಹಣವನ್ನೂ ಬೇಬಾಕಿಯಾಗಿ ಸಲ್ಲಿಸಿದ್ದು ನೋಡಿ ಚಿನ್ನಯ್ಯನಿಗೆ ಆಶ್ಚರ್ಯವಾಯಿತು. ಆದರೆ ಸುಬ್ಬಯ್ಯಗೌಡರು ಸಹಾಯ ಮಾಡಿದ್ದ ಸಂಗತಿ ತಿಳಿಯಲು ಅವನಿಗೆ ತಡವಾಗಲಿಲ್ಲ. ಇದನ್ನು ತಿಳಿದು ಅವನು ಬೆಂಕಿಯೇ ಆದ. ಅವನ ಹಿಂಬಾಲಕರೂ ಅವನಿಗೆ ಚುಚ್ಚಿ ಕೊಟ್ಟರು. ಕೋಣ ಎರಡು ಹೋರಿದರೆ ಗಿಡಕ್ಕೆ ಮೃತ್ಯು ಎನ್ನುವುದು ಈ ಜನ ತಿಳಿಯಲಾರದೆ ಹೋದರು. ಮುಖಂಡರ ನೆವದಲ್ಲಿ ಪಕ್ಷ ವಿಪಕ್ಷಗಳ ಜನರ ಹೋರಾಟ ಹೆಚ್ಚಾಯಿತು.

೬

ಒಂದು ದಿನ ರಾತ್ರಿ ಊಟ ಮಾಡಿ ಸುಬ್ಬಯ್ಯಗೌಡರು ಸಂದೂಕದ ಮುಂದೆ ಹಣತೆಯ ಬೆಳಕಿನಲ್ಲಿ ಏನೋ ಪತ್ರ ನೋಡುತ್ತಾ ಕೂತಿದ್ದರು. ಒಡನೆಯೇ ಏನೋ ನೆನಪಿಗೆ ಬಂದು, 'ಣೇ' ಎಂದು ಕೂಗಿದರು. ಪತ್ನಿಯ ಸಂಬೋಧನಾ ವಾಚಕ ಅದು.

'ಣೇ' ಬರಲಿಲ್ಲ. ಏನೋ ಕೆಲಸವಾಗಿದ್ದಳು

ಗೌಡರ ದನಿ ಇನ್ನೂ ಬಿರುಸಾಯಿತು. 'ಣೇ ಏನು ಮಾಡುತಾ ಇದೀಯೋ ಒಳಗೆ. ಏನು ಕಿವಿ-ಗಿವಿ ಹೊಂಟೋಗದೋ?'

'ಬಂದೇ ತಡೀರಿ ಒಸಿ. ಎಲ್ಲಾ ಒಂದೇ ಉಸುರು' ಎನ್ನುತ್ತಾ ಈರವ್ವ ರಂಗಪ್ರವೇಶ ಮಾಡಿದಳು.

'ಚಂದ್ರಾ ಏನು ಮಾಡುತಾ ಇದಾನೆ?'

'ಎಲ್ಲೋ ಹೋಗಿರಬೇಕು. ಇದೆಯಲ್ಲಾ ಅದೇನೋ ಸ್ಕೂಲೂ, ಗೀಲೂ ಅಂತ. ನನ್ನೂ ಅಕ್ಷಾರ ಕಲಿ ಅಂತ ಕೂತುಬಿಟ್ಟಿದ್ದ. ಅವನಿಂದ ಬಿಡಿಸಿಕೊಳ್ಳೋದೇ ಕಷ್ಟ ಆಯಿತು. ನೆವಾ ಹೇಳಿದ್ದಕ್ಕೆಲ್ಲ ಏನಾರೂ ಒಂದು ಸಮಾಧಾನ ಕೊಡ್ತಾನೆ. ಕೊನೇಗೂ, ಆಗಲಿ ನೋಡಾನಾ ಅನ್ನಬೇಕಾಯ್ತು.'

'ಊ. ನೀ ಇನ್ನು ವಿದ್ಯಾ ಕಲಿಯೋದೊಂದು ಬಾಕಿ. ಏನೂ ಇಲ್ಲದೇ ಮಾತಿಗೆ ಮಾತು ಜವಾಬು ಕೊಡ್ತೀಯೋ.'

'ಏನು ಕರೆದ ಕೆಲಸ ಹೇಳ್ತೀರೋ ಕಣೀ ಹರಡುತ್ತಾ ಕೂತ್ಕೋತೀರೋ?'

'ಅಲ್ವೇ. ಕಣಿ ಹರಡಿದವಳು ನೀನಾ ನಾನಾ? ಚಂದ್ರಾ ಇದಾನಾ ಅಂದ್ರೆ ಏನೇನೋ ಅಕ್ಷಾರ, ಗಿಕ್ಷಾರ ಅಂತ . . .'

'ತಪ್ಪು ನಂದೇ ಆಗ್ಲಿ . . . ಈಗಾರಾ ಹೇಳಬಾರದಾ ಅದೇನು ಸಂಗ್ತಿ?'

'ಹೇಳ್ತೀನಿ ಕೂತ್ಕೋ'

'ಇನ್ನಾ ಕೂತ್ಕೊಂಡು ಚಕ್ಕಂದಾ ಆಡೋಕೆ ಕೆಲಸ ಐತೆ' ಎಂದು ಹೇಳುತ್ತಾ ಈರವ್ವ ಕೂತುಕೊಂಡಳು.

'ಕೆಲಸ ಐತೆ ಅಂತ ಕೂತೇಬಿಟ್ಟೆಯಲ್ಲಾ. ಹೋಗ್ಲಿ, ಚಂದ್ರಂಗೇ ನಾರಾ ಲಗ್ನ ಮಾಡೋನು ಅಂತ ಇದೀಯೋ, ಬೇಡವೇ ಬೇಡಾ ಅಂತ್ಲೋ? ಏನೋ ನಾವು ಬದುಕಿರೋವಾಗ್ಲೇ ಅವನಿಗೆ ಲಗ್ನ ಮಾಡಿ ನೊಸೆ ಕರಸ್ಕೊಂಡು ಮೊಮ್ಮಕ್ಕಳು ನೋಡೋನು ಬೇಡವಾ?'

'ನಾ ಏನು ಬೇಡಾ ಅಂದೆನಾ? ನೀವು ತಾನೇ ಹೆಣ್ಣು ನೋಡದೇ ಕೂತಿದೀರಿ.'

'ಹೆಣ್ಣು ನೋಡೋದೇನು? ಇಲ್ಲೇ ಇಲ್ವಾ?'

'ಸರಿ. ಆ ಹುಡುಗೀನ ಕಟ್ಕೊಂಡು ದಿನಾ ಮನೇಲೇ ರಾದ್ಧಾಂತ ಷುರು ಆಗ್ಲಿ ಅಂತೀನೋ'

'ಅಲ್ವೇ, ಅವನು ರಾದ್ಧಾಂತ ಮಾಡಿದರೆ ಹೆಣ್ಣೇನು ಮಾಡ್ತೀ? ಅಲ್ಲದೆ ಈ ಕಾಲದಲ್ಲಿ ಹುಡುಗರ ಮಾತಿನ್ಹಂಗೆ ನಡಿಬೇಕೋ ನಮ್ಮ ಇಷ್ಟದ ಪ್ರಕಾರ ಆದಾತೋ?'

ಹೆಣ್ಣಿನ ಒಳ್ಳೆಯ ಗುಣ ಈರವ್ವನ ಮನಸ್ಸನ್ನೂ ಸೆರೆಹಿಡಿದಿತ್ತು.

'ಇನ್ನು ನನ್ನೇನು ಕೇಳೋದು. ಎಲ್ಲಾ ನಿಶ್ಚಯ ಮಾಡಿದೀರಿ — ಅಪ್ಪಾ ಮಕ್ಳು'

'ಅಲ್ಲ ಕಣೇ. ಅಷ್ಟಕ್ಕೇ ಕೋಪ ಮಾಡ್ಕೊಂಡ್‌ಬಿಟ್ಟೆಯಲ್ಲಾ. ನಾ ಕೊಡೋ ಸಮುಜಾಯಿಷಿ ತಕೋ.'

'ಸರಿ, ಹಾಗಾದ್ರೆ. ನಂದೇನೂ ಇಲ್ಲ.'

'ಈ ವರ್ಷ ಲಗ್ನ ಮಾಡೋದೇ ಬೇಡ್ವೇ ಅಂತ.'

'ಇನ್ನೇನು ಬರೋ ವರ್ಷದ್ಗಂಟಾ ನಾವು ಬದುಕಿರ್ತೇವೆ ಅನ್ನೋದೇನು ಗೊತ್ತು? ಹುಡುಗಾ ಬೆಳೆದಿಲ್ವಾ?'

ಗೌಡರು ಮಾತಾಡಲಿಲ್ಲ ಸ್ವಲ್ಪ ಹೊತ್ತಾದ ಮೇಲೆ,—

'ಆದರೆ ನಾವಾಗಿ ಕೇಳೋಕೆ ಹೋದರೆ ಆ ಚಿನ್ನಯ್ಯ ಏನಾದರೂ ಅಂದು ಕಳಿಸಿದರೆ ಏನು ಮಾಡೋದು ಅಂತ' ಎಂದು ಈರವ್ವನೇ ಮಾತು ಕೊಡಿಸಿದಳು.

ಅದಕ್ಕೆ ಗೌಡರು,—

'ಸರಿ, ಅದೊಂದು ಹುಡುಗ ಮುಕ್ಕ. ಅವನ ಮಾತು ಕಟ್ಕೊಂಡು ವಿರೋಧ ಮಾಡಿಕೊಳ್ಳೋಕಾಗುತದಾ? ನಾಲ್ಕು ದಿನ ಕುಣೀತಾನೆ. ಬಿಸೀ ರಕ್ತ ಆರಿದ ಮೇಲೆ ದಾರಿಗೆ ಬರ್ತಾನೆ' ಎಂದರು.

ಮರುದಿನವೇ ಸುಬ್ಬಯ್ಯಗೌಡರು ತಂಗಿಯೊಡನೆ ಈ ಮಾತೆತ್ತಿದರು. ಚಿನ್ನಯ್ಯನೂ ಆಗ ಮನೆಯಲ್ಲೇ ಇದ್ದ.

'ಅದಕ್ಕೇನಣ್ಣಯ್ಯ? ಇನ್ನು ನಮ್ಮ ಚೆನ್ನೀಗೆ ಚಂದ್ರನಿಗಿಂತ ಒಳ್ಳೆ ಗಂಡು ಎಲ್ಲಿ ಸಿಕ್ಕೀತು? ಅದೂ ಅಲ್ಲದೆ ನಮ್ಮನಮ್ಮ ನಂಟಸ್ತನ ಬಿಟ್ಟು ಹೋಗೋಕಾಗ್ತದಾ? ದೊಡ್ಡವರು ನೀವೆಲ್ಲಾ ಹೆಂಗೆ ಹೇಳಿದರೆ ಹಂಗೆ. ನಂದೇನೈತೆ ಇದರಲ್ಲಿ?'

ಚಿನ್ನಯ್ಯ ಮಾತ್ರ ಬಡಪೆಟ್ಟಿಗೆ ಒಪ್ಪಲಿಲ್ಲ. ಏನೇನೋ ಕುಂಟು ನೆವ ತೆಗೆದ. ಆದರೆ ತಾಯಿ,—

'ನಿಮ್ಮಪ್ಪ ಚೆನ್ನೀನ ಚಂದ್ರಂಗೇ ಕೊಡಬೇಕು ಎಂತ ಹೇಳಿ ಕಣ್ಣು ಮುಚ್ಚಿದರು. ಅವರ ಮಾತು ನಡಸಿಕೊಡಬೇಡ್ವಾ? ನಿನಗೆ ಇಷ್ಟ ಇಲ್ಲದಿದ್ದರೆ ನಿನ್ನ ಮಗಳನ್ನ ಕೊಡಬೇಡ. ಚೆನ್ನಿ ನಿನ್ನ ಮಗಳಲ್ಲ, ನನ್ನ

ಮಗಳು' ಎಂದು ಹಠ ಹಿಡಿದು ಕೂತಳು. ತಾಯಿಯ ಮಾತಿನ ಮುಂದೆಯೂ ಮಾವಯ್ಯನ ಶಾಂತ ಮನೋಭಾವದ ಮುಂದೆಯೂ ಅವನು ಸುಮ್ಮನಾಗಬೇಕಾಯಿತು

'ಹಾಗಾದ್ರೆ ನಾಳೇನೇ ಐನೋರ ಕೈಲಿ ಲಗ್ನ ಕಟ್ಟಿಸಿಬಿಡೋಣ' ಎಂದರು ಗೌಡರು, ಕೊನೆಯಲ್ಲಿ

ಲಕ್ಕವ್ವ, 'ಓ ಅದಕ್ಕೇನು? ಧಾರಾಳವಾಗಿ' ಎಂದಳು.

ಐನೋರು ಆ ಊರಿನ ಹನುಮಂತದೇವರ ಗುಡಿಯ ಪೂಜಾರಿ. ಹೆಸರು ರಾಮಾನುಜಯ್ಯ. ಊರಿನ ಜನದ ಬಾಯಲ್ಲಿ ಅವರು 'ಐನೋರು.' ದಿನವೂ ಬೆಳಗ್ಗೆ ಗುಡಿಯ ಬಾಗಿಲು ತೆಗೆದು ಹಗ್ಗ ಬಿಂದಿಗೆ ಹಿಡಿದು ಬಳಿಯಲ್ಲಿದ್ದ ಬಾವಿಯ ಕಟ್ಟೆಗೆ ಬಂದು ಬಿಂದಿಗೆಗೆ ಹುಳಿ ಹಾಕಿ ಚೊಕ್ಕ ಮಾಡಿ ಒಂದು ಕೊಡ ನೀರು ಸೇದುವುದು, ಆ ನೀರು ತೆಗೆದು ಹನುಮಂತದೇವರ ತಲೆಯ ಮೇಲೆ ಸುರಿದು ಜತೆಯಲ್ಲಿ ತಂದಿದ್ದ ನಾಲ್ಕು ದಾಸವಾಳದ ಹೂವು ಸೆಕ್ಕಿಸುವುದು, ಇನ್ನು ನಾಲ್ಕು ಹೂವು ಅರ್ಚಿಸಿ ಒಮ್ಮೆ ಚಪ್ಪಾಳೆ ತಟ್ಟಿ ಗಂಟೆ ಬಾರಿಸಿ ಮಂಗಳಾರತಿ ಎತ್ತುವುದು—ಇದು ಅವರ ಮೊದಲ ಕೆಲಸ. ಈ ಗಂಟೆಯ ಶಬ್ದ ಕೇಳಿ ಹಳ್ಳಿಯ ಹೆಂಗಸರು ತಮ್ಮ ಮಕ್ಕಳಿಗೇನಾದರೂ ಜ್ವರವೋ ಇನ್ನೇನಾದರೂ ಕಾಯಿಲೆಯೋ ಬಂದಿದ್ದರೆ ಅವನ್ನು ಎತ್ತಿಕೊಂಡು ಅಲ್ಲಿಗೆ ಬರುವರು. ಆಗ ಐನೋರು ಒಳಗಿಂದ ತೀರ್ಥ ತಂದು ಅದರಲ್ಲಿ ಬೆರಳದ್ದಿ 'ಹ್ರೀಂ' ಎಂದು ಗಟ್ಟಿಯಾಗಿ ಆ ಮಕ್ಕಳು ಬೆಚ್ಚುವ ಹಾಗೆ ಕೂಗಿ ಅವುಗಳ ಮುಖಕ್ಕೆ ನೀರೆರಚಿ ತಲಾ ಮೂರು ಕಾಸೋ ಆರು ಕಾಸೋ ಕೇಳುವುದು. ಇದು ಅವರ ಎರಡನೆಯ ಕೆಲಸ. ಇದೂ ತೀರಿಸಿದ ಮೇಲೆ ಯಾರಾದರೂ ಶಾಸ್ತ್ರ ಕೇಳುವವರು ಬಂದರೆ ಅವರ ಮುಂದೆ ಕವಡೆ ಬಿಟ್ಟು, ಆಟ ಕಟ್ಟಿ, ಅವರು ಬಂದ ಉದ್ದೇಶವನ್ನು ಅವರಿಗೆ ಅರಿಯದ ಹಾಗೆ ಉಪಾಯವಾಗಿ ಅವರ ಬಾಯಿಂದಲೇ ತಿಳಿದುಕೊಂಡು ಆಮೇಲೆ ಅನುಮಾನವಾಗಿ ಯಾವ ಕಡೆಗಾದರೂ ಜಾರಿಕೊಳ್ಳುವ ಹಾಗೆ ಕಣಿ ಹೇಳಿ ಕಾಣಿಕೆ ಕೇಳುವುದು—ಇದು ಮೂರನೆಯ ಕೆಲಸ. ಇವಲ್ಲದೆ ಊರಿನ ಜನ ಯಂತ್ರ-ಗಿಂತ್ರಗಳಿಗೆಲ್ಲ ಅವರ ಬಳಿಗೇ ಬರುತ್ತಿದ್ದರು. ಊರಿನ ಮದುವೆಗೆ ಹೆಣ್ಣು-ಗಂಡುಗಳ

ನಕ್ಷತ್ರದ ತಾಳೆ ನೋಡಿ, ಲಗ್ನ ಕಟ್ಟಿ, ಮಾಡಿಸುವ ಪುರೋಹಿತರೂ ಅವರೇ. ಹೀಗೆ ಅವರ ಕಾರ್ಯ ಊರಿನಲ್ಲಿ ಬಹುಮುಖವಾಗಿತ್ತು. ಈ ಈ ಎಲ್ಲ ಕಾರ್ಯಕ್ಕಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಕಾಣಿಕೆ ವಸೂಲಿ ಮಾಡುತ್ತಿದ್ದದ್ದಲ್ಲದೆ ವರ್ಷಕ್ಕಿಷ್ಟು ಭತ್ತವೆಂದು ಪ್ರತಿ ಸಂಸಾರದಿಂದಲೂ ಮಿರಾಸೆ ತೆಗೆದುಕೊಳ್ಳುತ್ತಿದ್ದರು.

ಮರುದಿನ ಬೆಳಗ್ಗೆ ಗೌಡರು ಅವರನ್ನು ಕಂಡಾಗ ಐನೋರು ಪಂಚಾಂಗ ನೋಡಿ ಬೆರಳೆಣಿಸಿ, 'ದಿವ್ಯಾಗಿದೆ. ಬರೋ ಶುಕ್ರವಾರದ ಹದಿನೈದು ದಿನಕ್ಕೆ ಲಗ್ನ ಇದೆ ಅದರಲ್ಲೇ ಮಾಡಬಹುದಲ್ಲ' ಎಂದರು.

ಮುಂದಿನ ಎರಡು ಮೂರು ದಿನದಲ್ಲೆ ಶಾಸ್ತ್ರೋಕ್ತವಾಗಿ ಲಗ್ನ ಪತ್ರಿಕೆಯೂ ವೀಳೆಯದ ಶಾಸ್ತ್ರವೂ ಆದವು. ಮದುವೆಗೆ ಇನ್ನು ಎರಡು ಮೂರು ದಿನವಿದೆಯೆನ್ನುವಾಗ ಸುಬ್ಬಯ್ಯಗೌಡರು ಊರಿಗೆಲ್ಲ ದೇವರ ಸಮಾರಾಧನೆ ಮಾಡಿಸಿದರು

ಧಾರೆಯ ಮೊದಲ ದಿನ ತೆಂಗಿನ ಹೂವು ಪೂಜಿಸಿ ತರುವ ಶಾಸ್ತ್ರ ನಡೆಯಿತು ಒಂದು ಕೊಡೆ ಹಿಡಿದು ಅದರ ಮೇಲೆ ಒಂದು ಶಾಲು ಹೊದಿಸಿ, ನಡುವಣ ಕೊಡೆಯ ಹಿಡಿಯನ್ನೊಬ್ಬರೂ ಶಾಲುವಿನ ನಾಲ್ಕು ತುದಿಯನ್ನು ನಾಲ್ವರೂ ಗೂಡಾರದ ಹಾಗೆ ಹಿಡಿದರು. ಅದರ ಅಡಿಯಲ್ಲಿ ಐವರು ಹೆಂಗಸರು ಮಿಂಚಿನ ಹಾಗೆ ಹೊಳೆಯುವ ಚೆಂಬಿನಲ್ಲಿ ನೀರು ತುಂಬಿ, ಹೂವಿನ ಬಟ್ಟಲಲ್ಲಿ ಹೂವಿಡುವ ಹಾಗೆ ಹೊಂಬಾಳೆಯಿಟ್ಟು ತಲೆಯ ಮೇಲೆ ಹೊತ್ತು ಊರ ಮುಂದಣ ಅರಳಿಕಟ್ಟೆಯ ಬಳಿಯಿಂದ ಮೆರವಣಿಗೆ ಯಲ್ಲಿ ಧಾರೆಯ ಮನೆಗೆ ತಂದರು ಚಂದ್ರಶೇಖರ ಇದನ್ನು ದೂರದಿಂದ ನೋಡಿದ. ತಮ್ಮ ಜನದ ಸೌಂದರ್ಯೋಪಾಸನೆಯ ಕಣ್ಣು ಎಂಥ ದೆಂಬುದು ಈ ನೋಟದಿಂದ ಗೊತ್ತಾಯಿತು ಇದನ್ನವನು ಹಿಂದೆ ನೋಡಿರ ಲಿಲ್ಲವೆಂದಲ್ಲ ಆದರೆ ಅಂದು ಅದರ ಅರ್ಥ ಗೊತ್ತಾಯಿತು. ಇಂಥ ಜನ ಇವೊತ್ತು ಇಷ್ಟು ಬಡತನದಲ್ಲಿ ಅಜ್ಞಾನದಲ್ಲಿ ತೊಳಲುತ್ತಿದಾರಲ್ಲ ಎಂಬ ಯೋಚನೆಯೇ ಅವನಿಗೆ, ಆಗಲೂ!

ಧಾರೆಯ ಮುಹೂರ್ತ ಬಂತು. ಗಂಡು ಹೆಣ್ಣುಗಳ ನಡುವೆ ಅಂತಃ ಪಟ ಹಿಡಿಸಿ ಐನೋರು 'ಶುಕ್ಲಾಂಬರಂಧರಂ' ಶ್ಲೋಕ ಹೇಳಿ, 'ಸುಲಗ್ನಾ

ಸಾವಧಾನಾ' ಹೇಳಿದರು. ಚಂದ್ರಶೇಖರ ಚಿನ್ನಮ್ಮನ ಕೊರಳಿಗೆ ಮಂಗಳ ಸೂತ್ರ ಕಟ್ಟಿದ.

ಲಕ್ಕವ್ವನ ಸಂತೋಷಕ್ಕಂತೂ ಮೇರೆಯೇ ಇಲ್ಲ. ತನ್ನ ಮಗಳು ಇಂಥವನ ಕೈಹಿಡಿವಳೆಲ್ಲಾ ಎಂದವಳ ಹಿಗ್ಗು. ತಲೆಗೆ ಪೇಟಾ ಇಟ್ಟು ಹಣೆಗೆ ಬಾಸಿಂಗ ಕಟ್ಟಿದಾಗ ಥೇಟ್ ಮಹಾರಾಜರ ಹಾಗೇ ಕಂಡ, ಅವಳ ಕಣ್ಣಿಗೆ. ದುಂಡಗೆ ಸುಕುಮಾರವಾದ ಶರೀರ. ಪುಟ್ಟ ಗಲ್ಲ. ನಗುವ ತುಟಿ. ಎಸಳಾದ ಮೂಗು. ಗಂಭೀರವಾದ ಒಳಗೊಳಗೇ ಹರಿಯುವ ಕಣ್ಣು. ನಾಲ್ಕೇ ನಾಲ್ಕು ಕಪ್ಪು ಕೂದಲು ಪೇಟದ ಸಂದಿನಿಂದ ಇಣಿಕಿ ನೋಡುತ್ತಿತ್ತು. ಲಕ್ಕವ್ವ ಎಲ್ಲಿ ಯಾರ ದೃಷ್ಟಿ ಬಡಿದೀತೋ ಎಂದು ಎಷ್ಟು ಸಲ ಕೆನ್ನೆಗೆ ಬೆರಳಿಟ್ಟು ಲಟಿಕೆ ಮುರಿದಳೋ! ಚೆನ್ನಿ-ಚಂದ್ರ ಸಾಕ್ಷಾತ್ ಪಾರ್ವತಿ-ಶಿವರ ಹಾಗೇ ಕಂಡರು, ಅವಳ ಕಣ್ಣಿಗೆ

ಧಾರೆಯ ಶಾಸ್ತ್ರವೆಲ್ಲಾ ಆಗಿ ದೇವರಿಗೂ ಹಿರಿಯರಿಗೂ ಅಡ್ಡ ಬೀಳಲು ಹೆಣ್ಣು-ಗಂಡು ಹೋದರು ಲಕ್ಕವ್ವನೂ ಈರವ್ವನೂ ಒಟ್ಟಿಗೆ ನಿಂತಿದ್ದರು. ಈರವ್ವ, 'ನಿಮ್ಮತ್ತೆಗೆ ಅಡ್ಡ ಬೀಳೋ' ಎಂದು ಚಂದ್ರಶೇಖರನಿಗೆ ಹೇಳಿದಳು ಚಂದ್ರನೂ ಚೆನ್ನಿಯೂ ಲಕ್ಕವ್ವನಿಗೆ ನಮುಸ್ಕರಿಸಿದರು ಆಗ ಈರವ್ವ, 'ಇನ್ನು ಮೇಲೆ ಚಂದ್ರ ನಿಮ್ಮ ಮಗ' ಎಂದಳು ಲಕ್ಕವ್ವನ ಮುಖ ಸ್ನಿಗ್ಧ ಮನೋಹರವಾಯಿತು. ಆಕೆಯ ಬಾಯಿಂದ ಹೊರಬಿದ್ದ ನಗೆ ಮಗುವಿನ ಎಳನಗೆಗೆ ಸಮಾನವಾಗಿತ್ತು ಆಮೇಲೆ ಚಂದ್ರ-ಚೆನ್ನಿಯರು ಈರವ್ವನಿಗೆ ನಮುಸ್ಕರಿಸಿದರು. ಆಗ ಲಕ್ಕವ್ವ 'ಹಂಗಾದರೆ ಚೆನ್ನಿ ಇನ್ನು ಮೇಲೆ ನಿಮ್ಮ ಮಗಳು' ಎಂದಳು 'ಆಗಲೂ ನಾವು ಬೀಗಿತೀರೇ ಆದೆವಲ್ಲಾ' ಎಂದು ಈರವ್ವ ಮಾತು ಕೂಡಿಸಿದಳು ಆಗ ಸುತ್ತ ನೆರೆದಿದ್ದವರಲ್ಲಿ ನಗೆಯ ತೆರೆಯೆದ್ದಿತು.

ಊರ ಜನರಂತೂ ತಮ್ಮ ಮನೆಯ ಮದುವೆಯೇ ಎಂಬಷ್ಟು ಉತ್ಸಾಹದಿಂದ ಮದುವೆಯಲ್ಲಿ ಭಾಗವಹಿಸಿದರು. ಪ್ರತಿಯೊಬ್ಬರೂ ಮನೆಯವರೇ ಆದಾಗ ಆದರಿಸುವುದು ಯಾರನ್ನ? ಊರವರ ಈ ನಿರ್ಮಲ ಸ್ನೇಹ, ತಿಳಿಯಾದ ಮನಸ್ಸು ಕಂಡು ಚಂದ್ರಶೇಖರನ ಕಣ್ಣಲ್ಲಿ ನೀರು ಬಂತು ಈ ಮದುವೆಯಲ್ಲೆಲ್ಲಾ ಸ್ವಲ್ಪ ಸೆಟೆದುಕೊಂಡೇ ಇದ್ದವರೆಂದರೆ

ಚಿನ್ನಯ್ಯ, ಅವನ ಹಿಂಬಾಲಕರಲ್ಲಿ ಕೆಲವರು. ಆ ಪಾರ್ಟಿಯಲ್ಲೂ ಎಷ್ಟೋ ಜನರು ವೈಮನಸ್ಸು ಮರೆತು ಲಗ್ನದ ಸಂತೋಷದಲ್ಲಿ ಭಾಗಿಗಳಾಗಿದ್ದರು.

ಅವೊತ್ತು ಸಂಜೆ ನಡೆದ ಒಂದು ಸಂದರ್ಭದಿಂದ ಚಿನ್ನಯ್ಯನಿಗೆ ಬಹಳ ಕೋಪ ಬಂತು. ಮದುವೆಯ ಸಮಾರಂಭದ ಸಂಜೆ ಬೀಗರು ಪರಸ್ಪರ ಪಕ್ಷದವರನ್ನು ಅಪಹಾಸ್ಯ ಮಾಡಿ ಹಾಡು ಹೇಳುವ ವಾಡಿಕೆ ಹಳ್ಳಿಯಲ್ಲಿ ಇನ್ನೂ ಇದೆ. ಗಂಗವ್ವ ಹಾಡು ಹೇಳತ್ತಾ, ಹೇಳುತ್ತಾ—

'ಅತ್ತೀಗೆ ಅತ್ತೀಗೆ ಜಾಕಾಯಿ ಪೆಟ್ಟೀಗೆ
ನಮ್ಮಣ್ಣ ನಿಮ್ಮೂರ ಸರದಾರ
ನಮ್ಮಣ್ಣ ನಿಮ್ಮೂರ ಸರದಾರ। ಅತ್ತೀಗೆ
ನಿಮ್ಮಣ್ಣ ನಮ್ಮೂರ ತಳವಾರ'

ಎಂದು ಹೇಳಿದಳು. ನೆರೆದಿದ್ದ ಹೆಂಗಸರು ಗೊಳ್ಳೆಂದು ನಕ್ಕರು ಅಲ್ಲೇ ಹೋಗುತ್ತಿದ್ದ ಚಿನ್ನಯ್ಯ ಈ ಹಾಡು ಕೇಳಿ ಉರಿದುಬಿದ್ದ. ಬೇಕೆಂತಲೇ ತಾನು ಹೋಗುವಾಗ ಈ ಹಾಡು ಹೇಳಿದರೆಂದು ಹಾರಾಡಿದ. ಗಂಗವ್ವ ಹಾಗೇನೂ ಉದ್ದೇಶಿಸಿರಲಿಲ್ಲ. ಆದರೆ ಚಿನ್ನಯ್ಯನ ರಾದ್ಧಾಂತ ಬಲು ವಿರಸಕ್ಕೇ ಇಟ್ಟುಕೊಂಡಿತು. 'ನಾನು ಆಗಲೇ ಹೇಳಲಿಲ್ಲವೆ? ಇವರಿಗೆ ನಮ್ಮನ್ನ ಕಂಡರೆ ಬಲೇ ತಾತ್ಸಾರ ಅಂತ' ಎಂದು ತಾಯಿಗೆ ಹೇಳಿದ. ಕೊನೆಗೆ ಇದು ಬೀದಿಯ ಜಗುಲಿಯ ಮೇಲೆ ಕೂತು ಮಾತಾಡುತ್ತಾ ಇದ್ದ ಶಾನುಭೋಗ ನರಸಿಂಹಯ್ಯನವರ ವರೆಗೂ ಹೋಯಿತು.

'ಅಲ್ಲಯ್ಯ—ನೀನು ಹಾಸ್ಯ ಅನ್ನೋದೇ ಸಹಿಸೋದಿಲ್ಲವಲ್ಲಯ್ಯ. ಈಗಲ್ಲದೆ ನಾಳೆ ನಿನ್ನ ಮುಂದೆ ಬಂದು ಹಾಸ್ಯ ಮಾಡುತಾರೆಯೆ? ಇಷ್ಟಕ್ಕೂ ನೀ ಯಾಕೆ ಅಲ್ಲಿಗೆ ಹೋಗಬೇಕಾಗಿತ್ತು?' ಎಂದು ಏನೇನೋ ಹೇಳಿ ಸಮಾಧಾನ ಮಾಡಬೇಕಾಯಿತು.

ಮದುವೆಯಾದೊಡನೆಯೇ ಮನೆ ತುಂಬಿಸಿಕೊಳ್ಳುವ ಶಾಸ್ತ್ರವೂ ಆಯಿತು. ಗೋಧೂಳಿ ಲಗ್ನದಲ್ಲಿ ಚಂದ್ರ ಚೆನ್ನಿಯ ಕೈಹಿಡಿದು ತಮ್ಮ ಮನೆಗೆ ಬಂದ. ಹೊಸಿಲ ಮೇಲೆ ಒಂದು ದೊಡ್ಡ ಲೋಟದಲ್ಲಿ ಅಕ್ಕಿ

ತುಂಬಿ ಇಟ್ಟಿದ್ದರು ಸೊಸೆಯಾಗಿ ಬರುವವಳು ಅದನ್ನು ಬಲಗಾಲಿನಿಂದ ಒದ್ದು ಮನೆಯೊಳಕ್ಕೆ ಗಂಡನ ಸಮೇತ ಬರಬೇಕಾಗಿತ್ತು. ಅಕ್ಕಿ ಹೇಗೆ ಮನೆ ತುಂಬ ಚೆಲ್ಲಾಡುವುದೋ ಹಾಗೆ ಅವಳು ಪ್ರವೇಶಿಸಿದ ಮನೆಯಲ್ಲಿ ಐಶ್ವರ್ಯ ತುಳುಕಾಡಲಿ ಎಂದು ಅದರ ಅರ್ಥವಂತೆ ಮನೆಯ ಬಾಗಿಲಿಗೆ ಬರುತ್ತಲೇ ಚೆನ್ನಿಯ ಎದೆ ತವಕಗೊಂಡಿತು ತಾನೆಲ್ಲಿ ಅದನ್ನು ಸರಿಯಾಗಿ ಒದೆಯುವುದಿಲ್ಲವೋ, ಅದೆಲ್ಲಿ ಉರುಳದೆ ಹೋದೀತೋ, ಉರುಳಿದರೂ ಅಕ್ಕಿ ಚೆಲ್ಲಾಡದೆ ಹೋದೀತೋ, ಎಂದು ದುಗುಡ. ಅದರ ಮುಂದೆ ಬಂದು ನಿಂತಾಗ ಸುತ್ತ ಸೇರಿದ್ದವರ ಕಣ್ಣೆಲ್ಲ ಆ ಲೋಟದ ಮೇಲೆ, ಚೆನ್ನಿಯ ಬಲಗಾಲ ಅಂಗುಷ್ಟದ ಮೇಲೆ ನಟ್ಟಿತ್ತು. ಚೆನ್ನಿಯ ಜೀವವೆಲ್ಲ ಕಣ್ಣಲ್ಲೇ ನಿಂತಿತ್ತು. ಚಂದ್ರಶೇಖರ ಮೃದುವಾಗಿ ನಗುತ್ತ ನಿಂತಿದ್ದ. ಜನರ ಈ ಶಾಸ್ತ್ರವೆಲ್ಲ, ನಂಬಿಕೆಯೆಲ್ಲ, ಅವನಿಗೆ ಆಟವಾಗಿ ಕಂಡಿತೇನೋ. ಇಷ್ಟು ಜನದ ನಡುವೆ, ಎಲ್ಲರ ನೋಟಗಳನ್ನೂ ಕೇಂದ್ರೀಕರಿಸಿದ್ದ ಆ ಆರು ಅಂಗುಲದ ಲೋಟ ಆರು ಅಡಿಗೆ ಬೆಳೆದು ನಿಂತಷ್ಟು ಪ್ರಾಮುಖ್ಯ ತಳೆದಿತ್ತು

ಕೊನೆಗೆ ಚೆನ್ನಿ ಬಲಗಾಲು ಎತ್ತಿ ಅದನ್ನು ಒದೆದಳು. ಅವಳ ಗತ್ತು ಚಂದ್ರಶೇಖರನಿಗೆ ಬಲು ಚೆಲುವಾಗಿ ಕಂಡಿತು. ಚೆನ್ನಿಯ ಕಾಲು ಲೋಟಕ್ಕೆ ತಾಕಿ ಅದು ಮಾರು ದೂರ ಮುಂದೆ ಬಿತ್ತು ಅಕ್ಕಿ ಮನೆಯಲ್ಲೆಲ್ಲ ಸೂರೆಯಾಯಿತು ಸೇರಿದ್ದ ಹೆಂಗಸರಲ್ಲಿ ಸಂತೋಷ ಉಕ್ಕಿತು. 'ಸಾಕ್ಷಾತ್ ಲಕ್ಷ್ಮೀದೇವಿ ಗಂಡನ ಜತೇಲಿ ತುಂಬು ಸಂಸಾರ ಮಾಡವ್ವ' ಎಂದು ಹರಸಿದರು

ಚೆನ್ನಿ ಚಂದ್ರಶೇಖರನ ಕೊಟಡಿಯೊಳ ಹೊಕ್ಕಾಗ ಅದರ ಸರಳತನವನ್ನು ನೋಡಿ ಬೆರಗಾದಳು ಅವಳು ಇದಕ್ಕೆ ಮುಂಚೆ ಯಾವೊತ್ತೂ ಆ ಕೊಟಡಿ ನೋಡಿರಲಿಲ್ಲ. ಬಾಗಿಲ ಎದುರಿಗೆ, ಕಿಟಕಿಯ ಪಕ್ಕದಲ್ಲಿ ಒಂದು ಮೇಜು. ಆ ಮೇಜಿನ ಎದುರಿನ ಗೋಡೆಯ ಮೇಲೆ ಗಾಂಧೀಜೀಯ ಒಂದು ಚಿತ್ರ. ಇನ್ನೊಂದು ಬದಿಯಲ್ಲಿ, ಗೋಡೆಯ ಮಗ್ಗುಲಲ್ಲಿ ಒಂದು ಅಲಮಾರಿನ ತುಂಬ ಪುಸ್ತಕ ಮೇಜಿನ ಮೇಲೆ ಬಿಳಿಯ ವಸ್ತ್ರ ಹೊದಿಸಿತ್ತು ಅದರ ಮೇಲೆ ನಾಲ್ಕಾರು ಪುಸ್ತಕ—

ಕುಮಾರವ್ಯಾಸ ಭಾರತ, ಸರ್ವಜ್ಞ ವಚನಗಳು, ನಿಘಂಟು, ಮತ್ತಾವುದೋ ಒಂದೆರಡು ಪುಸ್ತಕ. ಕೊಟಡಿಯಲ್ಲಿ ಪ್ರತಿಯೊಂದು ವಸ್ತುವೂ ಓರಣವಾಗಿದ್ದು ಚಂದ್ರಶೇಖರನ ಚೆಲುವಿನ ಕಣ್ಣನ್ನು ತೋರಿಸುತ್ತಿತ್ತು. ಇದನ್ನೆಲ್ಲಾ ಚೆನ್ನಮ್ಮ ಕಣ್ಣರಳಿಸಿ ನೋಡಿದಳು ಚಂದ್ರಶೇಖರ ಅವಳಿಗೆ ಆದರ್ಶಮೂರ್ತಿಯಾಗಿ ಕಂಡ. ಅವನನ್ನು ಭಕ್ತಿಯಿಂದ ಪೂಜಿಸಬೇಕೋ, ಪ್ರೀತಿಯಿಂದ ಆಲಂಗಿಸಬೇಕೋ, ಅಭಿಮಾನದಿಂದ ನೇವರಿಸಬೇಕೋ ಅರಿಯದಾದಳು. ಆದರೆ ಚಂದ್ರಶೇಖರ ಆದರ್ಶಪ್ರಿಯನಾದರೂ ಮಾನವ ಸಹಜವಾಗಿ ಅವನ ಹೃದಯದಲ್ಲಿ ಒಲುಮೆಯಿದೆ; ಅವನೂ ಪ್ರೇಮ ರಾಗಾನ್ವಿತ ಜೀವಿ, ಎಂಬುದನ್ನು ತಿಳಿಯಲು ತಡವಾಗಲಿಲ್ಲ. ಆ ಆದರ್ಶಕ್ಕೂ ಈ ಅನುರಾಗಕ್ಕೂ ವಿರೋಧಾಭಾಸವೇನಿಲ್ಲ. ಒಂದಕ್ಕೊಂದು ಪೂರಕ. ಆದರೆ ಚೆನ್ನಿಗೆ ಅದು ಈವರೆಗೆ ತಿಳಿದಿರಲಿಲ್ಲ, ಅಷ್ಟೆ .....

'ಚೆನ್ನಾ, ನನ್ನಲ್ಲಿ ಏನು ಕಂಡು ನನ್ನ ಕೈಹಿಡಿದೆಯೆ?' ಎಂದ ಚಂದ್ರು.

'ನನ್ನಲ್ಲಿ ಏನಿದೆಯೆಂತ ನನ್ನ ಕೈಹಿಡಿದಿರಿ' ಎಂದಳು ಚೆನ್ನಾ, ನಿದಾನವಾಗಿ. ಪ್ರಶ್ನೆಗೆ ಮರು ಪ್ರಶ್ನೆ.

'ಒಳ್ಳೇ ಮಾತಿನ ಮಲ್ಲಿಯೇ, ನೀನು. ಇದು ನನಗೆ ಗೊತ್ತಿರಲಿಲ್ಲ.'

'ಗೊತ್ತಾಗುತಾ ಇತ್ತು. ಆದರೆ ಮದುವೆಗೆ ಮುಂಚೆ ಇಂತಾ ಪ್ರಶ್ನೆ ಹಾಕೋದಿಲ್ಲ, ನೀವು—ಗಂಡಸರು'

'ಅಲ್ಲವೇ. ನಾ ಓದಿದೇನೆ ದೊಡ್ಡ ಹುದ್ದೆ ಸಂಪಾದಿಸುತೇನೆ, ಎಂತ ನೀನೇನಾದರೂ ನನ್ನ ಕೈಹಿಡಿದೆಯೋ? ನಾನೀಗ ಮಾಡುತಾ ಇರೋದಕ್ಕೆ ನಿನ್ನ ಒಪ್ಪಿಗೆ ಇದೆಯೇ ಎಂತ.'

'ನೀವು ಮಾಡಿದ್ದೆಲ್ಲಾ ನನಗೆ ಒಪ್ಪಿಗೇನೇ.'

'ನಾ ಮಾಡಿದ್ದು ನಿನಗೆ ಒಪ್ಪಿಗೆ ಆಗೋ ವಿಷಯವಲ್ಲಾ ಚೆನ್ನಿ. ನಿನಗೆ ಒಪ್ಪಿಗೆ ಆಗೋ ಅಂಥಾ ಕೆಲಸ ನಾ ಮಾಡುತಾ ಇದೇನಾ ಎಂತ.'

'ನಾ ಒಪ್ಪದೇ ಇದ್ದರೆ ನಿಮ್ಮ ಕೈ ಹಿಡೀತಾ ಇದ್ದೆನಾ?'

ಪುನಃ ಚಂದ್ರಶೇಖರನೇ ಸೋತ. ಅವನು ಇನ್ನೊಂದು ಮಾತಿನ ತಂತುವನ್ನು ಹಿಡಿಯಬೇಕಾಯಿತು.

'ನಿನಗೆ ಓದೋಕೆ ಬರೆಯೋಕೆ ಚೆನ್ನಾಗಿ ಬರುತ್ತಾ, ಚೆನ್ನಿ?'

'ಚಿಕ್ಕಂದಿನಲ್ಲಿ ಕಲಿತದ್ದು. ಈಚೆಗೆ ಓದೋಕೆ ಪುಸ್ತಕಾ ತಂದು ಕೊಡೋವರು ಯಾರು? ಅದೂ ಅಲ್ಲದೆ ಮನೆ ಕೆಲಸಾನೇ ಕೈ ತುಂಬಾ ಇರುತ್ತಾ ಇತ್ತು'

'ನಾ ಮುಂದಕ್ಕೆ ಕಲಿಸಿದರೆ ಕಲಿತುಕೋತಿಯಾ?'

'ನಾ ಒಲ್ಲೆ ಎಂದೆನೆ? ಇಷ್ಟಕ್ಕೂ ಕಲೀಬೇಕೆಂತ ನನಗೂ ಆಸೆ.'

ಈ ಮುಗ್ಧ ಹೃದಯಗಳ ಮಾತು ಆಲಿಸಲು ಎಳ ಬೆಳುದಿಂಗಳ ಕಿರಣವೊಂದು ಕಿಟಕಿಯಿಂದ ತೂರಿ ಬಂದು ಕುಮಾರವ್ಯಾಸ ಭಾರತದ ಮೇಲೆ ಬಿದ್ದಿತ್ತು.

ಮರುದಿನ ಮಧ್ಯಾಹ್ನ ಗೌಡರು ಊರಿಗೆಲ್ಲ ಔತಣವೇರ್ಪಡಿಸಿದ್ದರು. ಚಿನ್ನಯ್ಯನ ಪಕ್ಷದವರೂ ಎಷ್ಟೋ ಮಂದಿ ಹಿಂದಣ ವೈರ ಮರೆತು ಊಟಕ್ಕೆ ಬಂದು ಸಂತೋಷವಾಗಿ ಕಾಲ ಕಳೆದರು. ಇದನ್ನು ಕಂಡು ಚಂದ್ರಶೇಖರ, ಈ ವೈರ-ಗ್ಯಿರವೆಲ್ಲ ಹೊರಗಣ ಅಹಂಭಾವದ ಪ್ರತೀಕ, ಅಂತರ್ಯದಲ್ಲಿ ಹಳ್ಳಿಯವರೆಲ್ಲ ಮುಗ್ಧರು, ಸರಳರು, ಎಂದುಕೊಂಡ. ಆದರೆ ಈ ಮುಗ್ಧತೆ ಸರಳತೆಗಳ ಜತೆಗೆ ಮುನ್ನಡೆಯುವ ಆಕಾಂಕ್ಷೆಯೂ ಸ್ವಲ್ಪ ಸೇರಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು—ಎಂಬ ಒಂದು ದನಿಯೂ ಅವನ ಹೃದಯದಲ್ಲಿ ಮಿಡಿಯದೆ ಇರಲಿಲ್ಲ.

## ೭

ಯಥಾಪ್ರಕಾರ ಚಂದ್ರಶೇಖರನ ಕರ್ಮಚಕ್ರ ತಿರುಗತೊಡಗಿತು. ಮುಂಜಾನೆ ನಸುಕಿನಲ್ಲೆ ಎದ್ದು ಪ್ರಾತರ್ವಿಧಿ ತೀರಿಸಿ ಉಪಾಹಾರ ಮಾಡಿ ಹೊಲಕ್ಕೋ ತೋಟಕ್ಕೋ ಹೋಗುತ್ತಿದ್ದ. ತಂದೆಗೆ ಇಳಿ ವಯಸ್ಸಾಗಿದ್ದದ್ದರಿಂದ ಅವರ ಕೆಲಸದಲ್ಲಿ ನೆರವಾಗುವುದಗತ್ಯವಾಗಿತ್ತು. ಮಧ್ಯಾಹ್ನ ಮನೆಗೆ ಹಿಂದಿರುಗಿ ಊಟ, ವಿಶ್ರಾಂತಿ, ಓದು, ತಾಯಿಯೊಡನೆ, ಚೆನ್ನಿಯೊಡನೆ

ಹರಟೆ. ಆಮೇಲೆ ಹೊಲದ ಕೆಲಸವೇನಾದರೂ ಇನ್ನೂ ಇದ್ದರೆ ಅಲ್ಲಿಗೆ ಹೋಗುತ್ತಿದ್ದ. ಇಲ್ಲದಿದ್ದರೆ ಓದಿನಲ್ಲೋ ಊರಿನ ಕೆಲಸದಲ್ಲೋ ನಿರತನಾಗುತ್ತಿದ್ದ. ಸಂಜೆ ಬೇಗ ಊಟ ತೀರಿಸಿಕೊಂಡು ವಯಸ್ಕರ ಶಿಕ್ಷಣಶಾಲೆಗೆ ಹೋಗುತ್ತಿದ್ದ ಮೊದಲು ನರಸಿಂಹಯ್ಯನವರು ಕುಮಾರವ್ಯಾಸ ಭಾರತದಿಂದ ಒಂದು ಪ್ರಸಂಗ ಓದುತ್ತಿದ್ದರು ಅವರು ಬಲು ರಾಗವಾಗಿ ಓದುತ್ತಿದ್ದದ್ದರಿಂದ ಭಾರತ ವಾಚನ ಊರಿನವರನೇಕರನ್ನು ಆಕರ್ಷಿಸಿತ್ತು. ಅದು ಮುಗಿದ ಅನಂತರ ಶಿಕ್ಷಣ ತರಗತಿಯವರು ಮಾತ್ರ ಉಳಿದುಕೊಂಡು ಮಿಕ್ಕವರು ತೆರಳುತ್ತಿದ್ದರು. ಅನಂತರ ಅಂದು ಬಂದ ಪತ್ರಿಕೆಯನ್ನು ಚಂದ್ರಶೇಖರ ಓದಿ ನರಸಿಂಹಯ್ಯನೊಡನೆಯೂ ವಿದ್ಯಾರ್ಥಿಗಳೊಡನೆಯೂ ಚರ್ಚಿಸುತ್ತಿದ್ದ ಮೊದಮೊದಲು ವಿದ್ಯಾರ್ಥಿಗಳು ಇದರಲ್ಲಿ ಅಷ್ಟಾಗಿ ಭಾಗವಹಿಸುತ್ತಿರಲಿಲ್ಲ. ಕ್ರಮೇಣ ಅವರೂ ಬಾಯಿ ಹಾಕಲಾರಂಭಿಸಿದರು. ಕೆಂಪಣ್ಣನಂತೂ ಬಲು ಬೇಗ ತನ್ನ ವಿದ್ಯೆ ಸುಧಾರಿಸಿಕೊಂಡಿದ್ದ.

ಇದಾದ ಮೇಲೆ ಶಿಕ್ಷಣ ತರಗತಿ ಆಯಾ ಮಟ್ಟಕ್ಕೆ ತಕ್ಕ ಹಾಗೆ ಇದು ಎರಡು ಮೂರು ವರ್ಗವಾಗಿ ವಿಂಗಡವಾಗಿತ್ತು.

ಒಂದು ದಿನ ಇಳಿ ಹೊತ್ತಿನಲ್ಲಿ ಚಂದ್ರಶೇಖರ ಊರ ಬೀದಿಯಲ್ಲಿ ಹೋಗುತ್ತಾ ಇದ್ದ ಬಾವಿಯ ಮುಂದೆ ಜನ ತುಂಬಿದ್ದರು. ಅದರ ಪಕ್ಕದಲ್ಲೇ ಒಂದು ಒಗೆಯುವ ಕಲ್ಲು. ಆದರ ಮಗ್ಗುಲಲ್ಲೇ ಒಬ್ಬ ಒಂದು ದನ ತೊಳಯುತ್ತಾ ಇದ್ದ. ಅಲ್ಲೆಲ್ಲ ಕೊಚ್ಚೆಯು ರಂಪವಾಗಿತ್ತು. ಅಲ್ಲಿಗೆ ಬಂದಿದ್ದ ಹೆಂಗಸರ ಎರಡು ಮೂರು ಮಕ್ಕಳು ಬದಿಯ ಮಣ್ಣು ತೆಗೆದು ಮೈಗೆ ಬಳಿದುಕೊಂಡು ಆಟವಾಡುತ್ತಿದ್ದವು. ಅವೋ, ನಿರುತ್ಸಾಹದ ಪ್ರತೀಕ. ಒಂದರ ಕಣ್ಣು ನೋವಿನಿಂದ ಪಿಳಿಚಿಗೂಡಿತ್ತು. ಇನ್ನೊಂದಕ್ಕೆ ಕಜ್ಜಿ. ಅದರ ಮೇಲೆ ನೊಣ ಕೂತು ಅಸಾಧ್ಯ ಹಿಂಸೆ ಕೊಡುತ್ತಿದ್ದವು. ಚಂದ್ರಶೇಖರ ನೋಡಿದ. ಈ ಮಕ್ಕಳಿಗಿಂತ ಆ ದನವೇ ವಾಸಿ ಎನಿಸಿತು. ಅವನ ಕಣ್ಣಲ್ಲಿ ಹನಿಯೊಡೆಯಿತು. ತಾನು ಅಷ್ಟು ದಿನವೂ ಮಾಡಿದ ಕೆಲಸವೆಲ್ಲ ವ್ಯರ್ಥವೆನಿಸತೊಡಗಿತ್ತವನಿಗೆ. ಹಳ್ಳಿಯ ಪುನರುದ್ಧಾರ ಮಾಡುವುದೂ ಒಂದೇ, ಸಮುದ್ರದಲ್ಲಿ ಹುಣಿಸೆಹಣ್ಣು ಕದರುವುದೂ ಒಂದೇ,

ಎಂದು ಅಂದು ಶಾನುಭೋಗರು ಹೇಳಿದ ಮಾತು ನೆನಪಿಗೆ ಬಂತು....

ಹಾಗೆಯೇ ಯೋಚಿಸಿದ. ಬಹು ದಿನದಿಂದ ಅವನ ಮನಸ್ಸಿನಲ್ಲಿ ಮೂಡಿದ್ದ ಸತ್ಯವೊಂದು ಹೆಚ್ಚು ನಿಚ್ಚಳವಾಯಿತು. ಹಳ್ಳಿಯ ಈ ಎಲ್ಲ ಬೇನೆಯ ಮೂಲ, ದಾರಿದ್ರ್ಯ ಈ ದಾರಿದ್ರ್ಯ ತೊಲಗದೆ ನಿರುತ್ಸಾಹ ಹಿಂಗದು. ನಿರುತ್ಸಾಹ ಹಿಂಗಿದರೆ ಬೇರೆ ಸುಧಾರಣಾ ಕಾರ್ಯವೇ ಬೇಡ ಎಲ್ಲ ತಾನಾಗಿಯೇ ಸರಿಹೋಗುತ್ತದೆ. ಹೀಗೆಂದು ಅವನಿಗೆ ತೋರಿತು. ಈ ಜನ ವರ್ಷದಲ್ಲಿ ಎಷ್ಟೋ ಕಾಲ ಕೆಲಸವಿಲ್ಲದೆಯೇ ಇರುತ್ತಾರಲ್ಲ. ಇವರ ಕೆಲಸವಿಲ್ಲದ ಕೈಗೆ ಕೆಲಸ ಅಂಟಿಸಿ, ಬರಿಹೊಟ್ಟೆಗೆ ಅನ್ನ ನೀಡಿ, ಬೆತ್ತಲೆ ಮೈಗೆ ಬಟ್ಟೆ ತೊಡಿಸಿ, ಭಗ್ನ ಹೃದಯಕ್ಕೆ ಬೆಳಕು ನೀಡುವ ಉಪಾಯ ಕುರಿತು ಯೋಚಿಸತೊಡಗಿದ ಅವನಿಗೆ ಗ್ರಾಮ ಕೈಗಾರಿಕೆ ಕೇಂದ್ರದ ವಿಚಾರ ಹೊಳೆಯಿತು ಹಿಂದೆ ತಾನು ಅಂಥ ಕೇಂದ್ರವೊಂದರಲ್ಲಿ ಕೆಲಸ ಮಾಡಿ ಅನುಭವ ಪಡೆದಿದ್ದದ್ದೂ ನೆನಪಿಗೆ ಬಂತು. ಇಲ್ಲೂ ಏಕೆ ಒಂದು ಕೇಂದ್ರ ಏರ್ಪಡಿಸಬಾರದು? ಎಂದು ಯೋಚಿಸಿದ.

ಈ ವಿಚಾರ ಬಂದದ್ದೇ ತಡ, ನರಸಿಂಹಯ್ಯನವರಲ್ಲಿ ಮಾತಾಡಿದ. ಅವರೂ ಕೂಡ, 'ಆಗಬಹುದು, ಆದರೆ ಹಣಕ್ಕೇನು ಮಾಡುವುದು?' ಎಂದರು

ಸಹಕಾರ ಸಂಘದ ಮಾದರಿಯಲ್ಲಿ ಒಂದು ಸಂಘ ಏರ್ಪಡಿಸಿ ಎಲ್ಲರೂ ಸಾಧ್ಯವಾದಷ್ಟು ಹಣ ಹಾಕಿ ಒಂದೆರಡು ಮಗ್ಗ, ಕೆಲವು ನೂಲುವ ರಾಟೆ ತರಿಸಬಹುದೆಂದು ಆಲೋಚಿಸಿದ. ಆದರೆ ಈ ಪ್ರಯತ್ನ ನಿರೀಕ್ಷಿಸಿ ದಷ್ಟು ಯಶಸ್ವಿಯಾಗಲಿಲ್ಲ. ಎಲ್ಲ ಸುಧಾಮನ ಅಣ್ಣತಮ್ಮಂದಿರೇ. ಕೊನೆಗೆ ಉಪಾಯವಿಲ್ಲದೆ ತಂದೆಯನ್ನು ಕೇಳಬೇಕಾಯಿತು.

ತಂದೆ ಐನೂರು ರೂಪಾಯಿ ಕೊಟ್ಟರು. ಅವರ ಬಳಿ ಇದ್ದದ್ದು ಅಷ್ಟೇ. ಆದರೆ ಯುದ್ಧಕಾಲದ ಏರು ಬೆಲೆಯಲ್ಲಿ ಅದು ಸಾಕೇ? ಕೊನೆಗೆ ಪಂಚಾಯಿತಿಯಿಂದ ಇನ್ನು ಐನೂರು ರೂಪಾಯಿ ಕೊಡಬೇಕೆಂದು ಚಂದ್ರಶೇಖರ ಕೇಳಿಕೊಂಡ.

ಆದರೆ ಪಂಚಾಯಿತಿ ಸದಸ್ಯರನ್ನು ಒಪ್ಪಿಸಬೇಕಾದರೆ ತಿಪ್ಪರಲಾಗ ಹಾಕಬೇಕಾಯಿತು. ಎಲ್ಲರೂ ಸಂಶಯ ಮನೋವೃತ್ತಿಯವರೇ. ಕೊನೆಗೆ ಚಂದ್ರಶೇಖರನ ತಂದೆಯೂ ಕೂಡ,--

'ನೋಡು ಚಂದ್ರು. ಇದರಲ್ಲೆಲ್ಲ ಹುಷಾರಾಗಿ ನಡೀಬೇಕಪ್ಪ. ನೀ ಒಂದು ಮಾಡೋಕೆ ಹೋಗಿ ಒಂದಾಗಿ ನಮಗೆಲ್ಲ ಕೆಟ್ಟ ಹೆಸರು ತರ ಬೇಡಾಪ್ಪ' ಎಂದರು

ಹಳ್ಳಿಯವರ ಹಟವಾದಿತನವನ್ನು ಒಂದೇ ಏಟಿಗೆ ಮುರಿಯಲು ಸಾಧ್ಯವಿರಲಿಲ್ಲ. ಆದ್ದರಿಂದ ತುಂಬ ಸಹನೆ ತೋರಬೇಕೆಂಬುದನ್ನು ಚಂದ್ರಶೇಖರ ಅರಿತಿದ್ದ.

ಬಲು ಚರ್ಚೆಯಾದ ಮೇಲೆ ಪಂಚಾಯಿತಿಯವರು ಒಪ್ಪಿದರು. ಈ ತೀರ್ಮಾನ ಸರ್ಕಾರಕ್ಕೆ ಹೋಗಿ ಅಲ್ಲಿಂದ ಒಪ್ಪಿಗೆ ಬರಬೇಕಾದರೆ ಇನ್ನೆರಡು ತಿಂಗಳಾಯಿತು. ಕೊನೆಗೆ ಈ ಕಾರ್ಯ ಪ್ರಾರಂಭವಾಯಿತು. ಇದನ್ನು ಪ್ರಾರಂಭ ಮಾಡಲು ಸರ್ಕಾರದವರೂ ತಮ್ಮ ಕಡೆಯ ನುರಿತ ಕೆಲಸಗಾರರೊಬ್ಬರನ್ನು ಕಳಿಸಿಕೊಟ್ಟಿದ್ದರು. ಅಂತೂ ಇಂತೂ ಊರ ಮಧ್ಯವಲ್ಲಿ ಖಾಲಿಯಿದ್ದ ಜಾಗದಲ್ಲಿ ಒಂದು ಗುಡಿಸಲು ಎದ್ದಿತು. ಅದರಲ್ಲಿ ನಾಲ್ಕು ಮಗ್ಗ, ಕೆಲವು ರಾಟೆ. ಮೊದಮೊದಲು ಈ ರಾಟೆಗಳಲ್ಲಿ ಎಷ್ಟೋ ಕೆಲಸವಿಲ್ಲದೆ ನಿಂತಿರುತ್ತಿದ್ದವು. ಆದರೆ ಬರುಬರುತ್ತ ಅವುಗಳ ಚಕ್ರ ಸಂತತ ವಾಗಿ ತಿರುಗತೊಡಗಿದವು. ಬಡ ಮುದುಕಿಯರು, ಕೆಲಸವಿಲ್ಲದವರು, ಬೇಸರವಾದವರು—ಎಲ್ಲರೂ ಈ ರಾಟೆ ತಿರುಗಿಸಲು ಪ್ರಾರಂಭ ಮಾಡಿ ಧರು. ಕೆಲವು ತಿಂಗಳಲ್ಲೇ ಇದು ಜೇನುಗೂಡಿನ ಹಾಗಾಯಿತು. ಜನಕ್ಕೆ ಎಷ್ಟೇ ದುಃಖವಿರಲಿ, ಏನೇ ಕಷ್ಟ ಒದಗಿರಲಿ, ರಾಟೆಯ ಮುಂದೆ ಕುಳಿತಾಗ ಅವರ ತುಟಿಯ ಮೇಲೆ ನಗೆ ಮಿನುಗುತ್ತಿತ್ತು ಕಣ್ಣಲ್ಲಿ ಮಿಂಚು ಹೊಳೆಯುತ್ತಿತ್ತು. ಅರುವತ್ತು ವರ್ಷದ ಮುದುಕರೂ ಜೀವನದಲ್ಲಿ ಉತ್ಸಾಹಗೊಂಡು ಆರು ವರ್ಷದ ಹುಡುಗರ ಹಾಗೆ ಚಿನ್ನಾಟವಾಡು ತ್ತಿದ್ದರು. ಚಂದ್ರು ಇದನ್ನೆಲ್ಲಾ ನೋಡುತ್ತಾ ತನ್ನ ಕಾರ್ಯ ಸಫಲವಾಗು ತ್ತಿದ್ದದ್ದಕ್ಕಾಗಿ ಹಿಗ್ಗಿ ಹೋದ.

ಮಗ್ಗದ ಮೇಲೂ ಮೊದಲು ಚಂದ್ರಶೇಖರನೇ ಕುಳಿತಿರಬೇಕಾಯಿತು. ಊರಿನಲ್ಲಿ ಮಿಲ್ಲುದಾರದಿಂದ ಬಟ್ಟೆ ನೇಯುತ್ತಿದ್ದು ಈಚೆಗೆ ಅದಕ್ಕೆ ತಕ್ಕ ಬಂಡವಾಳವಿಲ್ಲದೆ ಆ ಕಸಬು ಬಿಟ್ಟಿದ್ದ ಒಬ್ಬಿಬ್ಬರು ನೇಕಾರರು ತಮ್ಮನ್ನು ಕರೆದಾಗ,—

'ಬಿಡಿ, ಸ್ವಾಮಿ. ಆ ಒರಟುದಾರ ನೇಯುವವರು ಯಾರು? ನಮ್ಮ ಕೈಲಂತೂ ಆಗೋದಿಲ್ಲ' ಎಂದು ಉದಾಸೀನದಿಂದ ನುಡಿದಿದ್ದರು.

ಆದರೆ ಬರಬರುತ್ತ ಜನ ಇದರಲ್ಲಿ ಉತ್ಸಾಹ ತೋರತೊಡಗಿದರು. ಕೆಂಪಣ್ಣನಂತೂ ಇದರಲ್ಲಿ ಪ್ರವೀಣನಾದ. ಮಗ್ಗದವರೂ ತಮ್ಮ ಕಸಬು ಇನ್ನೊಬ್ಬರ ಕೈಗೆ ಹೋಗುವುದನ್ನು ಸಹಿಸಲಿಲ್ಲ. ಅವರ ನುರಿತ ಕೈ, ಖಾದಿಯ ದಾರದ ಮೇಲೂ ಕುಶಲತೆಯಿಂದ ಓಡಾಡತೊಡಗಿತು.

ಇದರಿಂದ ಬಹಳ ಲಾಭವೇನೂ ದೊರೆಯುತ್ತಿರಲಿಲ್ಲ, ನಿಜ. ಆದರೆ ಹಳ್ಳಿಯ ದಾರಿದ್ರ್ಯಕ್ಕೆ ಸಂಜೀವಿನಿಯಾಗಿ ಪರಿಣಮಿಸಿತು. ವರಮಾನವೇ ಇಲ್ಲದೆ ಬಹು ಜನ ಕಷ್ಟ ಪಡುವುದಕ್ಕಿಂತ ಅಲ್ಪ ವರಮಾನವಾದರೂ ಅವರಿಗೆ ಬರುವುದು ಒಳ್ಳೆಯದಲ್ಲವೇ? ಎಂಬುದು ಚಂದ್ರಶೇಖರನ ಮತ. ಜನರೂ ಲಾಭದೃಷ್ಟಿ ಮರೆತು ಪರಸ್ಪರ ಸಹಕಾರದೃಷ್ಟಿಯಿಂದ ದುಡಿದರು

ಚಂದ್ರಶೇಖರನಿಗೆ ಇಷ್ಟರಿಂದಲೇ ತೃಪ್ತಿಯಿಲ್ಲ. ಕ್ರಮವಾಗಿ ಇತರ ಗ್ರಾಮಕೈಗಾರಿಕೆಗಳನ್ನೂ ತೆರೆಯಬೇಕೆಂದು ಆಸೆ. ಬೆಲ್ಲ, ಎಣ್ಣೆ ಮುಂತಾದ ಗ್ರಾಮಕೈಗಾರಿಕೆಗಳು ಹಿಂದೆ ಬಿದ್ದಿದ್ದವು ಅವುಗಳ ಜಾಗವನ್ನು ಪಟ್ಟಣದ ಸಕ್ಕರೆ, ಮಿಲ್ಲಿನ ಎಣ್ಣೆ ಆಕ್ರಮಿಸಿದ್ದವು. ಇವನ್ನು ಕೊಳ್ಳಲು ಜನರ ಕೈಯಲ್ಲಿ ಹಣವಿದ್ದರೆ ತಾನೆ? ಆದರೂ ಊರ ಕೊನೆಯಲ್ಲಿದ್ದ 'ಉಪಾದ್ರ' ಅಂಗಡಿ ಬೆಳೆಯುತ್ತಲೇ ಇತ್ತು.

ಉಪಾದ್ರು ಮೊದಲು ಸುಗ್ಗಿಯ ಕಾಲದಲ್ಲಿ ಮಾತ್ರ ಕಣದ ಬಳಿಯೋ ಊರ ಬಾಗಿಲಲ್ಲೋ ಅಂಗಡಿ ಇಟ್ಟು ಧಾನ್ಯಕ್ಕೆ ಪ್ರತಿಯಾಗಿ ಕಡಲೇಕಾಯಿ-ಪುರಿ ಮಾರುತ್ತಿದ್ದರು ಆಮೇಲೆ ಊರಿನಲ್ಲಿ ಅಂಗಡಿ ಖಾಯಂ ಆಯಿತು. ಕಡಲೆಕಾಯಿ-ಪುರಿಗಳ ಜತೆಗೆ ಬೆಂಕಿಪೊಟ್ಟಣ-ಸೀಮೆಯೆಣ್ಣೆಗಳೂ ಬಂದವು.

ಈಗ ಅವರ ಅಂಗಡಿಯಲ್ಲಿ ಇಲ್ಲದ ಪದಾರ್ಥವಿಲ್ಲ. ಬರೀ ಬೀಡಿ ಸಿಗರೇಟು ಗಿರಾಕಿಗಳನ್ನು ಸುಧಾರಿಸುವುದೇ ಅವರಿಗೆ ಸಾಕು ಸಾಕಾಗಿ ಹೋಗುತ್ತಿತ್ತು. ಗಳಿಸಿದ ಅಗಾಧ ಲಾಭ ಮಂಗಳೂರಿನ ಕಡಲ ಕರೆಯಲ್ಲಿ ಆಸ್ತಿ ಕೊಳ್ಳಲು ವಿನಿಯೋಗವಾಗುತ್ತಿತ್ತು. ಈಚಿಗೆ ಇವರ ಕಡೆಯವರೇ ಒಂದು ಹೋಟಲನ್ನೂ ಇಟ್ಟಿದ್ದರು. ಹೀಗೆ ಹಳ್ಳಿಯ ಜನಕ್ಕೆ ಉಪಜೀವನದ ಮಾರ್ಗ ಮಾತ್ರ ಇಲ್ಲದೆ, ಇದ್ದ ಹಣವೂ ಹೊಳೆಯಾಗಿ ಹೊರಕ್ಕೆ ಹರಿದುಹೋಗುತ್ತಿತ್ತು.

ಚಂದ್ರಶೇಖರನಿಗೆ ಈ ಹಣದ ಹೊಳೆಯನ್ನು ತಡೆಯುವುದು ಅಗತ್ಯವೆಂದು ತೋರಿತು. ಇದಾಗಬೇಕಾದರೆ ಜನ ತಮಗೆ ಅಗತ್ಯವಾದವುಗಳಲ್ಲಿ ಸಾಧ್ಯವಾದಷ್ಟನ್ನು ತಾವೇ ತಯಾರಿಸಿಕೊಳ್ಳುವ ಹಾಗೆ ಮಾಡಬೇಕಾಗಿತ್ತು. ಆದ್ದರಿಂದ ಇತರ ಗ್ರಾಮಕೈಗಾರಿಕೆಗಳನ್ನೂ ಕ್ರಮೇಣ ಏರ್ಪಡಿಸಿ ಜನದ-ಜೀವನದ ಮಟ್ಟ ಉನ್ನತವಾಗುವ ಹಾಗೆ ಮಾಡಬೇಕೆಂದು ಯೋಚಿಸುತ್ತಿದ್ದ ಊರಿನಲ್ಲಿ ಕ್ಷೀಣಗತಿಯಲ್ಲಿದ್ದ ಗಾಣವನ್ನೇ ಉತ್ತಮಗೊಳಿಸಬೇಕೆಂದೂ ಯೋಚಿಸಿದ್ದ. ಊರ ಬಳಿಯಲ್ಲಿ ಪಾಳು ಬಿದ್ದಿದ್ದ ನೆಲದಲ್ಲಿ ರೈತರು ವೈಜ್ಞಾನಿಕವಾಗಿ ಹಣ್ಣು ತರಕಾರಿ ಬೆಳೆಯುವ ಹಾಗೆ ಮಾಡುವ ವಿಚಾರವೂ ಅವರ ಮನಸ್ಸಿಗೆ ಬಂದಿತ್ತು. ಆದರೆ ಇದೆಲ್ಲ ಕಾರ್ಯರೂಪಕ್ಕೆ ಬರಲು ಕಾಲ ಬೇಕಾಗಿತ್ತು ಒಂದೆರಡು ದಿನದಲ್ಲಿ ಆಗುವ ಕೆಲಸವಾಗಿರಲಿಲ್ಲ, ಇದು

ಊರ ಮುಂದಣ ಕೆರೆಯನ್ನು ಜೀರ್ಣೋದ್ಧಾರ ಮಾಡುವ ವಿಚಾರವನ್ನೂ ಚಂದ್ರಶೇಖರ ಎತ್ತದೆ ಇರಲಿಲ್ಲ. ಆದರೆ ಅದನ್ನು ದುರಸ್ತು ಮಾಡಲು ತಗಲುವಷ್ಟು ಹಣ ಪಂಚಾಯತಿಯಲ್ಲಿ ಇರಲಿಲ್ಲ. ಊರಿನಲ್ಲೂ ಅದಕ್ಕಾಗಿ ಹಣ ಸುರಿಯಬಲ್ಲ ದಾತ ಯಾರೂ ಇರಲಿಲ್ಲ ಆದ್ದರಿಂದ ಇದಕ್ಕೂ ಸರ್ಕರಕ್ಕೇ ಬರೆಯಬೇಕಾಯಿತು ಆದರೆ ಸರ್ಕಾರದವರಿಂದ ಅನುಕೂಲವಾದ ಉತ್ತರ ದೊರೆಯಲಿಲ್ಲ. ಎಲ್ಲಾ ಹಳ್ಳಿಗಳವರೂ ಒಟ್ಟಿಗೇ ಇದಾಗಬೇಕು, ಅದಾಗಬೇಕು ಎಂದು ಕೇಳಿದರೆ ಸರ್ಕಾರ ಏನು ಮಾಡುವುದು ಸಾಧ್ಯ? ಒಂದೊಂದಾಗಿ ಮಾಡೋಣ ಇದರಲ್ಲಿ ಯಾರದು ಹೆಚ್ಚು ಅಗತ್ಯವೋ ಅವರದು ಮುಂಚೆ. ನಿಮಗೆ ಕುಡಿಯುವ ನೀರಾದರೂ ಇದೆ

ಪುಣ್ಯವಂತರು ನೀವು. ಆದರೆ ಎಷ್ಟೋ ಹಳ್ಳಿಗಳಲ್ಲಿ ಅದೂ ಇಲ್ಲವಲ್ಲ—ಎಂದು ಹೇಳುತ್ತಿದ್ದರು. ಈ ಜಟಿಲಪ್ರಶ್ನೆ ಬಿಡಿಸುವುದು ಹೇಗೋ—ಚಂದ್ರಶೇಖರನ ಹಾಗೆಯೇ ತನಗೂ ಸಮಸ್ಯೆಯಾಗಿದೆಯೆಂದು ಸರ್ಕಾರ ಹೇಳುತ್ತಿತ್ತು.

ಆದರೆ ನಿರಾಶನಾಗಲಿಲ್ಲ, ಚಂದ್ರಶೇಖರ. ಊರಿನ ಜನರೇ ವಾರಕ್ಕೊಂದು ದಿನ ಊರಿಗಾಗಿ ದುಡಿದು ಇದನ್ನು ಸರಿಮಾಡಬಹುದಲ್ಲ, ಎಂದು ಯೋಚಿಸಿದ. ಆದರೆ ಜನ ಇನ್ನೂ ಅಷ್ಟು ದೂರ ಬರಲು ಸಿದ್ಧರಾಗಿರಲಿಲ್ಲ. ಹಿಂದೆ ಹಳ್ಳಿಯಲ್ಲಿ ಈ ಪದ್ಧತಿ ಇತ್ತು ಎನ್ನುವುದು ಅವರಿಗೆ ಅಂಥ ಒಳ್ಳೆಯ ಕಾರಣವಾಗಿರಲಿಲ್ಲ. ಅಲ್ಲದೆ ಇದರಿಂದ ಕೆರೆಯ ಕೆಳಗೆ ಜಮೀನು ಹೊಂದಿರುವವರಿಗೆ ಉಪಕಾರವೇ ಹೊರತು ಇತರರಿಗೇನು ಪ್ರಯೋಜನ?—ಎಂಬ ಭಾವವೂ ಹಲವರಲ್ಲಿ ಮೂಡದೆ ಇರಲಿಲ್ಲ. ಆದ್ದರಿಂದ ಸದ್ಯಕ್ಕೆ ಕೆರೆಯ ವಿಚಾರ ಕೈಬಿಡಬೇಕಾಯಿತು.

ಚಿನ್ನಮ್ಮ–ಚಂದ್ರಶೇಖರರ ವಿವಾಹದಿಂದ ಚಿನ್ನಯ್ಯನ ಮನಸ್ಸೇನೂ ಬದಲಾಯಿಸಲಿಲ್ಲ. ಈ ವಿಚಾರದಲ್ಲಿ ತನ್ನ ಅಭಿಪ್ರಾಯ ನಡೆಯದ್ದರಿಂದ ತನ್ನ ಅವಮಾನವಾದ ಹಾಗೆಯೇ ಅವನು ಭಾವಿಸಿದ. ಆದ್ದರಿಂದ ಚಂದ್ರಶೇಖರ ಸಾಧಿಸುತ್ತಿದ್ದ ಕಾರ್ಯವೆಲ್ಲ ಅವನ ಬಗೆಗೆ ಚಿನ್ನಯ್ಯನ ಮತ್ಸರವನ್ನು ಅಧಿಕಗೊಳಿಸುವುದಕ್ಕೇ ಅನುವಾಯಿತು. ಅವನ ಅನುಯಾಯಿಗಳೂ ಉರಿಗೆ ತುಪ್ಪ ಹೊಯ್ಯುತ್ತಿದ್ದರು. ಆದರೆ ಚಿನ್ನಯ್ಯ ಪ್ರತ್ಯಕ್ಷವಾಗಿ ಏನೂ ಮಾಡುವ ಹಾಗಿರಲಿಲ್ಲ. ಚಂದ್ರಶೇಖರನನ್ನೂ ಮಾವನನ್ನೂ ಮೂದಲಿಸಿ ತೃಪ್ತಿಗೊಳ್ಳುತ್ತಿದ್ದ. ಆದರೆ ಅವನ ಸೋಮಾರಿ ತಲೆ ಮಾತ್ರ ಚಂದ್ರಶೇಖರ–ಸುಬ್ಬಯ್ಯಗೌಡರನ್ನು ಕೆಡವಲು ಮಾರಿ ಬಲೆಯನ್ನು ಹೆಣೆಯುತ್ತಲೇ ಇತ್ತು.

೮

ಚಂದ್ರಶೇಖರನ ತಂದೆ ಸುಬ್ಬಯ್ಯಗೌಡರು ತಿಮ್ಮನ ಹೊಲವನ್ನು ಚಿನ್ನಯ್ಯನ ಕೈಹಿಡಿತದಿಂದ ಬಿಡಿಸಿಕೊಟ್ಟಂದಿನಿಂದ ತಿಮ್ಮನ ಜೀವನದಲ್ಲಿ

ಹೊಸ ಉತ್ಸಾಹ ತಲೆಯಿಕ್ಕಿತ್ತು. ಅವರಿಬ್ಬರಿಗೂ ಅವನು ವ್ಯಕ್ತಪಡಿಸುತ್ತಿದ್ದ ಕೃತಜ್ಞತಾಭಾವ, ಅವರೇ ತನ್ನ ಪಾಲಿಗೆ ಪ್ರತ್ಯಕ್ಷ ದೇವರು ಎಂದೆನ್ನುವ ವರೆಗೂ ಹೋಗುತ್ತಿತ್ತು ಹಿಂದೆ ಅವನು ಕಷ್ಟಪರಂಪರೆಯನ್ನೆ ಎದುರಿಸ ಬೇಕಾಗಿ ಬಂದಿದ್ದಾಗ ಮಾನವನ ಒಳ್ಳೆಯತನದಲ್ಲೇ ನಂಬಿಕೆ ತಪ್ಪಿ ಹೋಗಿತ್ತವನಿಗೆ ನಿರಾಶೆಯು ಪ್ರತ್ಯಕ್ಷ ನಿದರ್ಶನವಾಗಿ ಅವನನ್ನೆ ಯಾರಾ ದರೂ ತೋರಿಸಬಹುದಾಗಿತ್ತು ಆದರೆ ಈಗ ಅವನ ಜೀವನದಲ್ಲಿ ಮಾರ್ಪಾಟಾಗಿತ್ತು.

ಇದರ ಜತೆಗೆ ವ್ಯವಸಾಯದಲ್ಲೂ ಅವನಿಗೆ ಅತಿಶಯ ಶ್ರದ್ಧೆಯುಂಟಾ ಗಿತ್ತು. ಜಮೀನನ್ನೆಲ್ಲ ಒಮ್ಮೆ ಕಳೆದುಕೊಂಡಿದ್ದ ಅವನಿಗೆ ಅದರ ಬೆಲೆಯೇ ನೆಂಬುದು ಈಗ ಗೊತ್ತಾಗಿತ್ತು. ಉಳುವ ರೈತನಿಗೆ, ದುಡಿಯುವ ಅವನ ಸಂಸಾರಕ್ಕೆ, ಜಮೀನು ಸೇರಬೇಕು ಬೆಳಗೂ-ಬೈಗೂ ಇನ್ನೊಬ್ಬರ ಜಮೀನು ಸಾಗುವಳಿ ಮಾಡಿ ಅರಹೊಟ್ಟೆಯ ಜೀವನ ನಡಸಬೇಕಾಗಿ ಬಂದಿರುವ ಇಂದಿನ ರೈತನ ದುಸ್ಥಿತಿಯನ್ನು ಅವನು ಚೆನ್ನಾಗಿ ಕಂಡರಿತಿದ್ದ. ಚಂದ್ರಶೇಖರ ಕೊಟ್ಟ ಶಿಕ್ಷಣದಿಂದ ಇವನಿಗೆ ಈ ವಿಚಾರ ಇನ್ನೂ ಚೆನ್ನಾಗಿ ಮನದಟ್ಟಾಗಿತ್ತು. 'ದೇವರ ಪ್ರೀತಿ ಗಳಿಸಬೇಕಾದರೆ ಸ್ವತಃ ಪೂಜೆ ಮಾಡಬೇಕು. ಇನ್ನೊಬ್ಬರು ನನ್ನ ಪರವಾಗಿ ಆರಾಧಿಸಲಿ, ಫಲಮಾತ್ರ ನನಗೆ ಬರಲಿ—ಎಂದರೆ ಹೇಗೆ ಸಾಧ್ಯ? ಭೂಮಿಯನ್ನು ಯಾರು ಉತ್ತು, ಬಿತ್ತಿ, ಬೆಳೆಯುತ್ತಾರೋ ಅವರಿಗೇ ಆಕೆಯ ವರಪ್ರದಾನ, ಅವರೇ ಆ ಫಲಕ್ಕೆ ಅಧಿಕಾರಿಗಳು. ಭೂಮಿ ನನ್ನದು. ನೀನು ಸಾಗುವಳಿ ಮಾಡು. ಫಲ ಮಾತ್ರ ನನಗೆ ತಂದುಕೊಡು—ಎಂದು ಹೇಳಿದರೆ ಅದಕ್ಕಿಂತ ಅನ್ಯಾಯ ಇನ್ನಿಲ್ಲ. ಆದರೆ ನಮ್ಮ ಸಮಾಜವೆಲ್ಲ ಹೀಗೆಯೇ. ತೊಂಬತ್ತು ಜನ ದುಡಿಯುವುದು; ಹತ್ತು ಜನ ಆ ದುಡಿಮೆಯ ಫಲ ಭೋಗಿಸುವುದು—ಇದು ತಪ್ಪು. ದುಡಿತಕ್ಕೆ ಹಿರಿಮೆಯ ಸ್ಥಾನ ಕೊಡುವವರೆಗೂ ನಮ್ಮ ಸಮಾಜದ ಉನ್ನತಿಯಿಲ್ಲ. 'ಕಾಯಕವೆ ಕೈಲಾಸ' ಎಂದು ಬಸವಣ್ಣನವರು ಹೇಳ ಲಿಲ್ಲವೆ?' ಎಂದು ಒಂದು ದಿನ ಚಂದ್ರಶೇಖರ ರಾತ್ರಿಯ ಶಾಲೆಯಲ್ಲಿ ಜಮೀನುದಾರಿಪದ್ಧತಿಯ ವಿಚಾರವಾಗಿ ಉಪನ್ಯಾಸ ಮಾಡಿದ್ದ. ಈ ಮಾತು ಎಲ್ಲರಿಗಿಂತ ತಿಮ್ಮನ ಮನಸ್ಸಿನಲ್ಲಿ ಚೆನ್ನಾಗಿ ನಾಟಿತ್ತು 'ಆದ್ದರಿಂದ ಯಾರು

ಬೆಳೆಯುತ್ತಾರೋ ಅವರಿಗೆ ಭೂಮಿ. ಅನ್ಯಥಾ ಅಧಿಕಾರವಿಲ್ಲ' ಎಂದು ಚಂದ್ರಶೇಖರ ತನ್ನ ಉಪನ್ಯಾಸವನ್ನು ಹೇಳಿ ಮುಗಿಸಿದಾಗ ತಿಮ್ಮ ಎಲ್ಲರಿಗಿಂತ ಮುಂದಾಗಿ ಚಪ್ಪಾಳೆ ತಟ್ಟಿದ್ದ.

ತಿಮ್ಮನ ಬೇಸಾಯ ಊರಿನಲ್ಲೆಲ್ಲಾ ಪ್ರಸಿದ್ಧಿಯಾಗಿತ್ತು. ಆರಂಬದ ಕಾಲದಲ್ಲಂತೂ ಅವನು ರಾತ್ರಿಯ ವೇಳೆ ಸರಿಯಾಗಿ ನಿದ್ದೆಮಾಡುತ್ತಿದ್ದನೋ ಇಲ್ಲವೊ. ಕೋಳಿ ಕೂಗುವುದೇ ತಡ, ಹೆಗಲ ಮೇಲೆ ಗುದ್ದಲಿ ಹಾಕಿಕೊಂಡೋ, ನೇಗಿಲು ಎತ್ತು ಹೊಡೆದುಕೊಂಡೋ, ಹೊಲದ ಕಡೆ ಹೊರಟೇಬಿಡುತ್ತಿದ್ದ. ಅವನ ಈ ಶ್ರದ್ಧೆಯನ್ನು ಕಂಡು ಊರಿನ ಕೆಲವರು ಹಾಸ್ಯಮಾಡುತ್ತಿದ್ದರು. 'ಹೆಂಡತಿ ಇಲ್ಲ. ಮಕ್ಕಳಿಲ್ಲ ಗಂಡುಗೋವಿ. ಯಾರಿಗೋಸ್ಕರ ಹೀಗೆ ದುಡಿಯುತ್ತಾನೋ' ಎಂದು ಹೇಳುತ್ತಿದ್ದರು. ಅಂಥವರಿಗೆ ತಿಮ್ಮನ ಉತ್ತರ ಸಿದ್ಧವಾಗಿರುತ್ತಿತ್ತು : ಸಂಪತ್ತಿನ ಸಾಧನವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳದಿರುವುದು ಪಾಪವೆಂದು ಅವನು ಹೇಳುತ್ತಿದ್ದ. ನಾನು, ನನ್ನ ಹೆಂಡತಿ, ನನ್ನ ಮಕ್ಕಳು ಎಂದು ಜನರು ಸ್ವಾರ್ಥರಾಗಿರುವುದರಿಂದಲೇ ಜಗತ್ತಿನಲ್ಲಿ ಇಷ್ಟೊಂದು ಬಡತನ ತಾಂಡವವಾಡುತ್ತಿದೆಯೆಂಬುದು ಅವನ ಅಭಿಪ್ರಾಯ. ತಿಮ್ಮನ ಈ ಜ್ಞಾನವೆಲ್ಲ ಚಂದ್ರಶೇಖರನ ಶಿಕ್ಷಣದ ಪ್ರಭಾವ.

ಹಗಲೆಲ್ಲ ಅವನು ಹೊಲ ಬಿಟ್ಟು ಬರುತ್ತಲೇ ಇರಲಿಲ್ಲ. ಆ ಮಣ್ಣಿನ ಸಹವಾಸ ಅವನ ಜೀವನಕ್ಕೆ ಅತಿಶಯ ಶಾಂತಿ-ಸಮಾಧಾನಗಳನ್ನು ಒದಗಿಸಿಕೊಟ್ಟಿತ್ತು. ಸಾಗುವಳಿ ಸುಧಾರಣೆಯ ವಿಚಾರವಾಗಿ ಚಂದ್ರಶೇಖರ ಏನು ಸಲಹೆ ಕೊಟ್ಟರೂ ಅದನ್ನು ಮರು ಮಾತಿಲ್ಲದೆ ಅತಿಶ್ರದ್ಧೆಯಿಂದ ಎಲ್ಲರಿಗಿಂತ ಮುಂದಾಗಿ ಅನುಸರಿಸುತ್ತಿದ್ದ.

ಒಂದು ದಿನ ಸಂಜೆ ಕೆಲಸವೆಲ್ಲ ತೀರಿತ್ತು. ಸೂರ್ಯಾಸ್ತವಾಗಿ ಆಗಲೇ ಬಹು ಹೊತ್ತಾಗಿತ್ತು. ಪಡುವಲ ರಂಗು ಒಂದೊಂದಾಗಿ ಕರಗಿ ಆಕಾಶವನ್ನು ಕಪ್ಪು ಮುಸುಕುತ್ತಿತ್ತು. ಆ ಸಮಯದಲ್ಲಿ ತಿಮ್ಮ ಇನ್ನೇನು ಹೊಲದಿಂದ ಕಾಲು ಕೀಳಬೇಕು ಆಗ ಯಾವುದೋ ದನದ ಕತ್ತಿನ ಗಂಟೆಯ ಶಬ್ದ ಕೇಳಿಸಿತು. ಅದೂ ತನ್ನ ಹೊಲದ ನಡುವಿನಿಂದಲೇ

ಬಂದಂತೆ ಭಾಸವಾಯಿತು. ಕಿವಿಗೊಟ್ಟು ಆಲಿಸಿದ. ಮತ್ತೆ ಅದೇ ಶಬ್ದ.

ಹೊಲದಲ್ಲಿ ಜೋಳ ಹೊರವಾಗಿ ಎದೆಯ ಮಟ್ಟಕ್ಕೆ ಬೆಳೆದು ನಿಂತಿತ್ತು. ತಿಮ್ಮನ ಶ್ರದ್ಧೆಯಿಂದಲೂ ಚಂದ್ರಶೇಖರನ ಸಲಹೆಯಿಂದಲೂ ಅವನ ಆ ಸಾರಿಯ ಜೋಳದ ಬೆಳೆಯಂಥ ಬೆಳೆ ಆ ಸುತ್ತಿನಲ್ಲೇ ಆಗಿರಲಿಲ್ಲ. ನಮ್ಮ ರೈತರು ಸ್ವಲ್ಪ ಹೆಚ್ಚು ಶ್ರದ್ಧೆ ವಹಿಸುವುದಾದರೆ ಈಗ್ಗಿಂತ ಹೆಚ್ಚು ಬೆಳೆ ತೆಗೆಯುವುದೇನೂ ಕಷ್ಟವಲ್ಲವೆಂಬುದಕ್ಕೆ ಇದು ಉದಾಹರಣೆ ಯಾಗಿತ್ತು. ತಿಮ್ಮನಿಗಂತೂ ಇದೊಂದು ಹೆಮ್ಮೆಯ ವಿಚಾರವಾಗಿತ್ತು. ಆಗ ತನ್ನ ಹೊಲದ ನಡುವಿನಿಂದ ಬಂದ ಈ ಗಂಟೆಯ ಉಲಿ ಇತರರಿಗೆ ಆ ಸಂಧ್ಯಾಕಾಲದ ಪ್ರಶಾಂತ ವಾತಾವರಣದಲ್ಲಿ ಬಹು ಬಂಧುರವಾಗಿ ಕೇಳ ಬಂದಿರಬಹುದಾದರೂ ತಿಮ್ಮನಿಗೆ ಮಾತ್ರ ಅದು ಎದೆಯನ್ನೇ ಇರಿದ ಹಾಗೆ ಭಾಸವಾಯಿತು.

ತಿಮ್ಮ ಥಟ್ಟನೆ ಹಿಂದಿರುಗಿದ ಒಂದೇ ಒಂದು ಕ್ಷಣಕಾಲ ಮತ್ತೆ ನಿಂತು ಆಲಿಸಿದ. ಗಂಟೆಯ ಮೆಲುದನಿ, ದನ ಮೇಯುವ ಚರಕ್-ಪರಕ್ ಶಬ್ದ ಮತ್ತೆ ಅವನ ಎದೆಯಿರಿಯಿತು ಥಟ್ಟನೆ ಶಬ್ದ ಬರುತ್ತಿದ್ದ ಕಡೆಗೆ ತೆವರಿಯ ಮೇಲಿನಿಂದ ಓಡಿದ.

ಒಂದು ದನ ಹೊಲಕ್ಕೆ ನುಗ್ಗಿ ತನ್ನ ಬಾಯಿನ ಎಡಬಲಗಳಲ್ಲಿ ನಿಂತಿದ್ದ ಜೋಳದ ಗಿಡಗಳನ್ನಷ್ಟೆ ಮೇಯುತ್ತ ಮೇಯುತ್ತ ಮುಂದು ವರಿಯುತ್ತಿತ್ತು.

ತಿಮ್ಮನ ಮೈ ಬೆವರಿತು ಅವನ ವಿಚಾರಶಕ್ತಿ ಸಂಪೂರ್ಣವಾಗಿ ಉಡುಗಿಹೋಯಿತು.

ಹಾಗೆಯೇ ಬರಿಕೈಯಲ್ಲಿ ಆ ದನವನ್ನು ಓಡಿಸಲು ಪ್ರಯತ್ನ ಮಾಡಿದ. ಒಂದೆರಡು ಸಾರಿ ಬೆದರಿಸಿದ. ಬೆನ್ನ ಮೇಲೆ ಕೈಯಾಡಿಸಿದ. ಆದರೆ ಹೊಲ ಮೇಯುವುದರಲ್ಲೇ ಸಂಪೂರ್ಣವಾಗಿ ಮನಸ್ಸಿಟ್ಟು ಮೈಮರೆ ತಿದ್ದ ಆ ದನ, ಅವನ ಆಗಮನವನ್ನಾಗಲಿ ಬೆದರಿಕೆಯನ್ನಾಗಲಿ ಗಮನಿ ಸಲೇ ಇಲ್ಲ.

ತಿಮ್ಮನಿಗೆ ಕೋಪ ಬಂತು. ಹಿಂದಕ್ಕೆ ಬಂದ. ಅಲ್ಲೇ, ಹೊಲದ ಅಂಚಿನಲ್ಲಿ ಒಂದು ಕಲ್ಲು ಬಿದ್ದಿತ್ತು. ಆವೇಶದಿಂದ ಅದನ್ನು ಬೀರಿದ. ತಾನೇನು ಮಾಡುತ್ತಿದ್ದನೆಂಬುದೇ ಅವನಿಗೆ ಅರಿವಿರಲಿಲ್ಲ.

ಕಲ್ಲು ದನದ ಕಾಲಿಗೆ ತಗುಲಿತು. ನೋವಿನಿಂದ ಅದು ಮುಲುಗುತ್ತ ಹೊಲದಿಂದ ಹೊರಗೆ ಬಂತು ಬೈಗಿನ ಆ ಸಮಯದಲ್ಲಿ ಆ ದನ ಯಾರ ದೆಂಬುದಾಗಲಿ, ಅದು ಕುಂಟುತ್ತಿದ್ದದ್ದಾಗಲಿ ತಿಮ್ಮನಿಗೆ ಗೊತ್ತಾಗಲಿಲ್ಲ. ಆಗ ಅವನು ಅದನ್ನೆಲ್ಲ ವಿಚಾರ ಮಾಡುವ ಮನೋಸ್ಥಿತಿಯಲ್ಲೂ ಇರಲಿಲ್ಲ.

ಆದರೆ ಅದನ್ನು ಅಷ್ಟಕ್ಕೇ ಬಿಟ್ಟು ಮನೆಯ ಕಡೆ ಹೋದರೆ ಅದು ಮತ್ತೆ ಹೊಲ ನುಗ್ಗಿ ಮೇಯುವುದಿಲ್ಲವೆ? ಆದ್ದರಿಂದ ಅದನ್ನು ಹೊಡೆದು ಕೊಂಡು ಹೋಗಿ ದೊಡ್ಡಿಗೆ ಸೇರಿಸಬೇಕೆಂದು ಅದನ್ನು ಹೊಡೆಯಲು ಮುಂದೆ ಹೋದ. ಆಗ ಅದು ನಡೆಯಲಾರದೆ ಒಂದೆರಡು ಹಜ್ಜೆ ಕುಂಟುತ್ತ ನಡೆದು ಕೊನೆಗೆ ಮಲಗಿತು.

ತಿಮ್ಮ ಅದರ ಹತ್ತಿರ ಹೋಗಿ ನೋಡಿದ. ದನದ ಮೈ ತುಂಬಿ ಕೊಂಡು ನೋಡಲು ಚೆನ್ನಾಗಿತ್ತು. ಸುಬ್ಬಯ್ಯಗೌಡರನ್ನಾಗಲಿ ಚಿನ್ನಯ್ಯ ನನ್ನಾಗಲಿ ಬಿಟ್ಟು ಬೇರೆ ಯಾರ ಮನೆಯ ದನವೂ ಸಾಮಾನ್ಯವಾಗಿ ಮೈ ತುಂಬಿಕೊಂಡಿರುತ್ತಿರಲಿಲ್ಲ. ಜನದ ಹೊಟ್ಟೆಗೆ ಇದ್ದರೆ ತಾನೆ, ದನಕ್ಕೆ? ತಿಮ್ಮ ಪರೀಕ್ಷೆ ಮಾಡಿ ನೋಡಿದ. ಅದು ಚಿನ್ನಯ್ಯನ ಮನೆಯ ಹಸು!

ಅದನ್ನು ಎಬ್ಬಿಸಲು ತಿಮ್ಮ ಏನೇನೋ ಮಾಡಿದ ಆದರೆ ಆಗಲಿಲ್ಲ. ಆದರ ಕಾಲಿಗೆ ಬಲವಾದ ಏಟು ಬಿದ್ದಿತ್ತು.

ಆಗ ತಿಮ್ಮನಿಗೆ ತಾನು ಮಾಡಿದ ಕೆಲಸದ ಅರಿವಾಯಿತು. ಚಿನ್ನಯ್ಯನಿಗೆ ಮೊದಲೇ ತನ್ನನ್ನು ಕಂಡರೆ ಆಗುತ್ತಿರಲಿಲ್ಲ ಚಂದ್ರಶೇಖ ರನ ಸಹಾಯದಿಂದ ಅವನ ಸಾಲ ತೀರಿಸಿದಂದಿನಿಂದ ತಿಮ್ಮನನ್ನು ಕಂಡರೆ ಚಿನ್ನಯ್ಯನ ಮೈ ಉರಿಯುತ್ತಿತ್ತು. ಅವನನ್ನು ಗೋಳಾಡಿಸಲು ಚಿನ್ನಯ್ಯ ಸಮಯ ಕಾಯುತ್ತಲೇ ಇದ್ದ. ಇನ್ನು ಹೆಚ್ಚುಕಾಲ ಅಲ್ಲಿದ್ದರೆ, ಚಿನ್ನಯ್ಯ

ನಾಗಲಿ ಅವನ ಕಡೆಯವರಾಗಲಿ ಕಂಡು ಅನರ್ಥವಾದೀತೆಂದು ತಿಮ್ಮನಿಗೆ ಅಂಜಿಕೆಯಾಯಿತು. ಹೇಗಿದ್ದರೂ ಆ ಹಸು ಏಳುವ ಹಾಗಿರಲಿಲ್ಲ. ಆದ್ದರಿಂದ ಮತ್ತೆ ಹೊಲ ನುಗ್ಗಲಾರದು. ಮರುದಿನ ಯಾರಾದರೂ ಅದನ್ನು ಅಲ್ಲಿ ಕಂಡರೆ ಕಂಡುಕೊಳ್ಳಲಿ ಹೀಗೆಂದುಕೊಂಡು ಅವನು ಅಲ್ಲಿಂದ ಕಾಲ್ತೆಗೆದ.

ಆದರೆ ಅವನು ಹಿಂದಿರುಗುವುದಕ್ಕೂ ಅವನ ಎದುರಿಗೇ ಚಿನ್ನಯ್ಯ ಲಾಂದ್ರ ಹಿಡಿದು ಆಳಿನೊಡನೆ ಅಲ್ಲಿಗೆ ಬರುವುದಕ್ಕೂ ಸರಿಯಾಯಿತು. ಆ ಹಸು ಮನೆಯಲ್ಲಿ ಎಲ್ಲರ ಅಚ್ಚುಮೆಚ್ಚಾಗಿತ್ತು. ಸಂಜೆಯಾದರೂ ಅದು ಬಾರದೆ ಇದ್ದದ್ದರಿಂದ ಚಿನ್ನಯ್ಯನೇ ಅದನ್ನು ಹುಡುಕಿಕೊಂಡು ಬಂದಿದ್ದ.

ಚಿನ್ನಯ್ಯನ ಕಣ್ಣಿಗೆ ಆ ಹಸು ಬಿತ್ತು. ಅನತಿ ದೂರದಲ್ಲೇ ತಿಮ್ಮನೂ ನಿಂತಿದ್ದ.

ಚಿನ್ನಯ್ಯ ಮಾತಾಡಲಿಲ್ಲ. ಹಸು ಮಲಗಿದ್ದಲ್ಲಿಗೆ ಮುಂದುವರಿದ. ಅದನ್ನೆಬ್ಬಿಸಲು ಅವನೂ ಅವನ ಆಳೂ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು. ಒಂದು ಗಳಿಗೆಯಲ್ಲಿ ಹಸುವಿನ ಕಾಲು ಮುರಿದಿದೆಯೆಂಬುದು ಚಿನ್ನಯ್ಯನಿಗೆ ಗೊತ್ತಾಯಿತು.

ತಿಮ್ಮ ಮಾತಾಡದೆ ನಿಂತಿದ್ದ. ಅವನ ಮುಖ ಕಪ್ಪಿಟ್ಟಿತ್ತು. ತಾನು ಮಾಡಿದ ಕೆಲಸ ತಿಳಿದು ಇವನು ತನ್ನನ್ನು ಕೋರ್ಟಿಗೆ ಎಳೆಯದೆ ಬಿಡುವುದಿಲ್ಲ, ಎನಿಸಿತವನಿಗೆ.

ಚಿನ್ನಯ್ಯನಿಗೆ ತನ್ನ ಹಸುವಿನ ಕಾಲು ಮುರಿದ ದುಃಖಕ್ಕಿಂತ ಹೆಚ್ಚಾಗಿ ತಿಮ್ಮ ಸಿಕ್ಕಿಬಿದ್ದನೆಂದು ಸಂತೋಷವಾಯಿತು.

'ಪರವಾಯಿಲ್ಲ, ತಿಮ್ಮಯ್ಯ. ನಿಂ ಗುರಿ ಚೆನ್ನಾಗದೆ. ದನದ ಹೊಟ್ಟೇಗೇ ಹೊಡೆದು ಕೊಂದುಹಾಕಬಹುದಾಗಿತ್ತಲ್ಲ' ಎಂದ.

ತಿಮ್ಮ ತುಟಿ ಪಿಟಕ್ಕೆನ್ನಲಿಲ್ಲ. ಅಲ್ಲಿ ಒಂದು ಗಳಿಗೆಯೂ ನಿಲ್ಲಲಿಲ್ಲ. ತಾನೇ ಆ ಕೆಲಸ ಮಾಡಿರುವಾಗ ಇಲ್ಲವೆನ್ನಲು ಅವನಿಗೆ ಬಾಯಿ ಬರಲಿಲ್ಲ.

ಅಂದು ಚಿನ್ನಯ್ಯನ ಮನೆಯಲ್ಲಿ ತಿಮ್ಮನಿಗೂ ಚಂದ್ರಶೇಖರನಿಗೂ ತಾಯಿಯ ಎದುರಿಗೆ ಸಹಸ್ರನಾಮವೇ ಆಯಿತು. 'ನೋಡು, ನಿನ್ನ ಅಳಿಯನ ಪ್ರತಾಪ. ಅವನು ನಮ್ಮ ಮನೇನೇ ನೆಲಸಮ ಮಾಡ ಬೇಕು ಅಂತ ಕೂತವನೆ. ತಿಮ್ಮಂಗೆ ಹೇಳಿ ಹಸದ ಕಾಲು ಮುರಿಸೋ ಗಂಟ ಏರಿತು ಅವನ ಸೊಕ್ಕು' ಎಂದ.

'ಸುಮ್ಮನಿರೋ, ಸಾಕು. ಎಲ್ಲೋ ಹೊಲ ನುಗ್ಗಿರಬೇಕು. ಚಂದ್ರ ಯಾಕೆ ಹೇಳಿ ಮಾಡಿಸ್ತಾನೆ?' ಎಂದು ತಾಯಿಯೆಂದಳು.

ಕೊನೆಗೆ ತಾಯಿ ಮಕ್ಕಳ ನಡುವೆ ಒಂದು ಸಣ್ಣ ಜಗಳದಲ್ಲೇ ಇದು ಪರ್ಯವಸಾನವಾಯಿತು.

ಚಿನ್ನಯ್ಯ ಈ ಪ್ರಸಂಗವನ್ನು ಇಷ್ಟಕ್ಕೇ ಕೊನೆಗಾಣಿಸಲಿಲ್ಲ. ಕೋರ್ಟಿಗೂ ಹೋದ ಹಣದ ಪ್ರಲೋಭನಕ್ಕೆ ಒಳಗಾಗಿ ಚಿನ್ನಯ್ಯನ ಪರವಾಗಿ, ತಿಮ್ಮನೇ ಹಸುವಿನ ಕಾಲು ಮುರಿದನೆಂದು ಹೇಳಲು ಹಲವರು ಸಾಕ್ಷಿಗಳೂ ಒದಗಿದ್ದರು. ಅದೂ ಅಲ್ಲದೆ ತಿಮ್ಮನೂ ತಾನೇ ಆ ಕೆಲಸ ಮಾಡಿದ್ದರಿಂದ ತಾನು ಮಾಡಲಿಲ್ಲವೆಂದು ಹೇಳಲು ಇಷ್ಟಪಡಲಿಲ್ಲ. ತಪ್ಪು ಸಾಬೀತಾಗಿ ತಿಮ್ಮ ಐವತ್ತು ರೂಪಾಯಿ ಜುಲ್ಮಾನೆ ಕೊಡಬೇಕೆಂದು ಕೋರ್ಟಿನಲ್ಲಿ ತೀರ್ಮಾನವಾಯಿತು.

ತಿಮ್ಮನ ರೋಷ ಮೇರೆ ಮೀರಿತು ತಾನು ಅದರ ಕಾಲು ಮುರಿದದ್ದು ನಿಜ. ಆದರೆ ಬೇಕೆಂದು ಮಾಡಿರಲಿಲ್ಲ. ಅದೂ ಅಲ್ಲದೆ ಚಿನ್ನಯ್ಯ ಕೋರ್ಟಿಗೆ ಹೋಗುವ ಬದಲು ಊರಿನಲ್ಲೇ ತನ್ನನ್ನು ಕರೆದು ದಂಡ ಕೊಡಬೇಕೆಂದು ಕೇಳಬಹುದಾಗಿತ್ತು. ಕೋರ್ಟಿಗೆ ಎಳೆದು ಮಾನ ಹೋಗುವಂತೆ ಮಾಡಿದನಲ್ಲ, ಎಂದು ಕ್ರೋಧಗೊಂಡ. ಅವನು ದಾರೀಲಿ ಒಂಟಿಯಾಗಿ ಸಿಕ್ಕಲಿ. ಅವನ ಪ್ರಾಣ ತೆಗೆದುಬಿಡುತ್ತೇನೆ, ಎನ್ನುವ ವರೆಗೂ ಅವನ ಕೋಪ ಏರಿತ್ತು. ಆದರೆ ಚಂದ್ರಶೇಖರನನ್ನೂ ಚಿನ್ನಯ್ಯನ ತಾಯಿಯನ್ನೂ ನೆನೆದು ಆ ಕೋಪ ಶಮನ ಮಾಡಿ ಕೊಂಡ.

ಸುಬ್ಬಯ್ಯಗೌಡರಿಗೂ ಈ ಪ್ರಸಂಗದಿಂದ ತುಂಬ ದುಃಖವಾಗಿತ್ತು. ಇಂಥ ವಿಚಾರಕ್ಕೆಲ್ಲ ಕೋರ್ಟಿಗೆ ಹೋಗಿ ಅನ್ಯಾಯವಾಗಿ ಹಾಳಾಗು

ತ್ತಾರಲ್ಲ—ಎಂದು ಅವರ ದುಃಖ ಒತ್ತರಿಸಿ ಬಂತು. ತಮ್ಮ ಜೀವನದಲ್ಲಿ ಇಂಥ ಪ್ರಸಂಗಗಳು ಹಿಂದೆ ಎಷ್ಟೋ ಬಾರಿ ಬಂದಿದ್ದವು. ಆದರೆ ಆ ವಿರಸಗಳೆಲ್ಲ ಊರಿನ ಪಂಚಾಯತಿಯಲ್ಲೇ ಸಮರ್ಪಕವಾಗಿ ತೀರ್ಮಾನ ವಾಗಿದ್ದ ದೃಷ್ಟಾಂತಗಳು ಅವರಿಗಾಗ ನೆನಪಿಗೆ ಬಂದವು.

ಚಿನ್ನಯ್ಯನಿಗೆ ಈ ಗೆಲವು ದಿಗ್ವಿಜಯ ಸಮಾನವಾಗಿತ್ತು. ಈ ಒಂದು ಕೇಸಿನಿಂದ ತಿಮ್ಮನ ಹಮ್ಮು ಮುರಿಯಿತಲ್ಲದೆ ಚಂದ್ರಶೇಖರ-ಸುಬ್ಬಯ್ಯಗೌಡರ ತೇಜೋಭಂಗವೂ ಆಯಿತೆಂದುಕೊಂಡಿದ್ದ ಅಲ್ಲದೆ ಅವರೇ ತಿಮ್ಮನಿಗೆ ಹೇಳಿ ಅವನ ಕೈಲಿ ಈ ಕೆಲಸ ಮಾಡಿಸಿದ್ದರೆಂದೂ ಊರಲ್ಲೆಲ್ಲ ಸಾರತೊಡಗಿದ.

ಆದರೆ ಇಷ್ಟೇ ಸಾಲದು. ಚಂದ್ರಶೇಖರನನ್ನು ಮೆಲ್ಲಗೆ ಹೇಗಾದರೂ ಮಾಡಿ ಈ ಊರಿನಿಂದ ಓಡಿಸಬೇಕು ಅವನಿರುವ ವರೆಗೂ ತನಗೆ ಬೆಲೆಯಿಲ್ಲ ಎಂಬುದಾಗಿಯೂ ಅವನು ಭಾವಿಸಿದ್ದ. ಅಂತೆಯೇ ಅದನ್ನು ಯಾವ ರೀತಿ ಸಾಧಿಸಬೇಕೆಂಬ ಹಂಚಿಕೆಯೊಂದು ಅವನ ತಲೆಯಲ್ಲಿ ಮೊಟ್ಟೆಯೊಡೆಯುತ್ತಿತ್ತು.

೬

ಸುಗ್ಗಿ ಸಮೀಪವಾಗುತ್ತಿದ್ದ ಹಾಗೆ ಚೆನ್ನಮ್ಮ ತಾಯಿಯಾಗುವ ದಿನ ಬಳಿ ಸಾರುತ್ತಿದ್ದವು. ಶ್ರಾವಣದ ಮುಗಿಲು ಹೆಣ್ಣಾಗಿ ಧನ್ಯತೆಯ ಕಣ್ಣೀರು ಚೆಲ್ಲಿ ಹಸುರು ಪೈರಿನ ಮೇಲೆ ಮುತ್ತಿನ ಹೊದಿಕೆ ಹೊದಿಸಿದಾಗ ಚೆನ್ನಿ ತವರುಮನೆಗೆ ಹೋದಳು. ಅವಳು ಇದ್ದಾಗ ಚಂದ್ರಶೇಖರ ಏನು ಕೆಲಸ ಮಾಡಬೇಕಾದರೂ, 'ಚೆನ್ನಾ, ಹೀಗೆ ಮಾಡುತೇನೆ, ಹಾಗೆ ಮಾಡುತೇನೆ' ಎಂದು ಅವಳಿಗೆ ಹೇಳಿ ಅವಳ ಸಲಹೆ ಕೇಳುತ್ತಿದ್ದ. ಚೆನ್ನಮ್ಮ ಸಭಾವತಃ ಬಲು ಚುರುಕು. ಹಳ್ಳಿಯಲ್ಲಿ ಯಥಾರ್ಥ ಜೀವನ ನಡಿಸಿದ ಅವಳು ಹಳ್ಳಿಯ ಹೆಣ್ಣಾಗಿಯೇ ಉಳಿದಿದ್ದಳು ಚಂದ್ರಶೇಖರನದು ಒಮ್ಮೊಮ್ಮೆ ರೆಕ್ಕೆಯಿಲ್ಲದೆ ಮುಗಿಲಿಗೆ ಹಾರುವ ಸಾಹಸ. ಇದರಿಂದ ಎಷ್ಟೋ ಸಲ ಅವನ ಭಾವ ಜಗತ್ತಿಗೂ ವಾಸ್ತವ ಜೀವನಕ್ಕೂ ಮಹಾ

ತಿಕ್ಕಾಟವುಂಟಾಗುತ್ತಿತ್ತು. ಇಂಥ ಕಾಲದಲ್ಲಿ ಚೆನ್ನಮ್ಮ ಬಳಿಯಲ್ಲಿದ್ದು ನಿಚ್ಚಳವಾದ ಹಾದಿ ತೋರದಿದ್ದರೆ ಚಂದ್ರಶೇಖರ ಎಂದೋ ನಿರಾಶಾವಾದಿ ಯಾಗುತ್ತಿದ್ದ. ಪ್ರತಿಯೊಂದು ಒಳ್ಳೆಯ ಕೆಲಸ ಪ್ರಾರಂಭಿಸಿದಾಗಲೂ ಹಳ್ಳಿಯ ಜನ ಸಂಶಯದಿಂದ ಮುದುಡಿಕೊಳ್ಳುತ್ತಿದ್ದದ್ದನ್ನು ಕಂಡು ಚಂದ್ರ ಶೇಖರನಿಗೆ ದುಃಖ ಒತ್ತರಿಸುತ್ತಿತ್ತು. ಅಂಥ ಸಮಯದಲ್ಲಿ ಚೆನ್ನಿಯೇ ಅವನ ಬಾಳಗಂಬ. ಈಗ ಚೆನ್ನಿ ತವರುಮನೆಗೆ ಹೋದದ್ದರಿಂದ ಚಂದ್ರ ಶೇಖರನಿಗೆ ಏನೋ ಅರಕೆಯಾಗಿ ಕಂಡಿತು ಚೆನ್ನಿಯ ತೌರುಮನೆ ದೂರವಿರಲಿಲ್ಲ. ಬೇಕಾದಾಗ ಅಲ್ಲಿಗೆ ಹೋಗಲು ಅವನಿಗೆ ಬಿಗುಮಾನದ ಆತಂಕವಾಗಲಿ ಸಂಪ್ರದಾಯದ ಕಟ್ಟಾಗಲಿ ಇರಲಿಲ್ಲ. ಚಿನ್ನಯ್ಯ ದ್ವೇಷ ಸಾಧಿಸಿದರೂ ಚಂದ್ರಶೇಖರ ಅದನ್ನು ಲೆಕ್ಕಕ್ಕೆ ತೆಗೆದುಕೊಂಡಿರಲಿಲ್ಲ. ಆದರೂ ಚೆನ್ನಮ್ಮನ ಸಂತತ ಸಾಹಚರ್ಯ ತಪ್ಪಿಹೋಗಿದ್ದುದರಿಂದ ಅವನ ಕೆಲಸದಲ್ಲಿ ಕೈ ಮುರಿದಹಾಗಾಗಿತ್ತು.

ಸುಗ್ಗಿ ಬಂದಾಗ ಎಲ್ಲೆಲ್ಲೂ ಆನಂದವೇ ಅರೆಹೊಟ್ಟೆಯ ಜೀವನ ಸಾಗಿಸುತ್ತಿದ್ದ ಹಳ್ಳಿಗರ ಮೊಗದ ಮೇಲೂ ತೃಪ್ತಿಯ ನಗೆ ಮಿಂಚ ತೊಡಗಿತ್ತು. ಹಳ್ಳಿಗರ ಧಾರಾಳ ಮನೋಭಾವವನ್ನು ಆಗ ಕಾಣ ಬೇಕಿತ್ತು. ಅವರು ಊರ ಅಧಿಕಾರಿಗಳಿಗೆ ಕೊಡುತ್ತಿದ್ದ ಮಿರಾಸೆಯೇ ಎಷ್ಟೋ ಆಗುತ್ತಿತ್ತು. ಯಾರ ಮನೆಯ ಮುಂದೆ ನೋಡಿದರೂ ಸುಗ್ಗಿಯ ಗುರುತು ಏನಾದರೂ ಇರದೆ ಇರುತ್ತಿರಲಿಲ್ಲ. ಕೊನೆಯ ಪಕ್ಷ ಒಂದಿಷ್ಟು ಹೊಸ ಒಣ ಹುಲ್ಲಾದರೂ ಇರುತ್ತಿತ್ತು. ಈ ಯುದ್ಧಕಾಲದಲ್ಲೂ ಜನ ಇಷ್ಟು ಸುಖವಾಗಿದಾರಲ್ಲ ಎಂದು ಚಂದ್ರಶೇಖರ ಆಶ್ಚರ್ಯಪಟ್ಟ. ಹೀಗಿದ್ದಾಗ ದೇಶದಲ್ಲಿ ಕ್ಷಾಮವೇಕೆ? ಎಂಬುದು ಅವನಿಗೆ ಅರ್ಥ ವಾಗಲಿಲ್ಲ.

ಆದರೆ ಈ ವಿಚಾರವಾಗಿ ಆಳವಾಗಿ ಯೋಚಿಸಿದಾಗ ಇದರ ಅರ್ಥ ಹೊಳೆಯಿತು. ವರ್ಷಕ್ಕೆಲ್ಲ ಹೊಟ್ಟೆ ಬಟ್ಟೆಗಳಿಗೆ ಆಗುವಷ್ಟು ಬರುತ್ತಿದ್ದದ್ದು ಎಲ್ಲೋ ಕೆಲವರಿಗೆ ಮಾತ್ರ. ಇನ್ನು ಕೆಲವರು ವರ್ಷದ ಮೊದಲ ಅರ್ಧ ಭಾಗ ಹೆಚ್ಚು-ಕಡಿಮೆ ಸುಖವಾಗಿ ಕಾಲ ನೂಕಬಹುದಿತ್ತು. ಆಮೇಲೆ

ಅವರ ಪಾಡು ದೇವರಿಗೇ ಪ್ರೀತಿ. ಕೂಲಿಯವರಿಗಂತೂ ಕೆಲಸವಿದ್ದಾಗ ಹಿಟ್ಟು. ಇಲ್ಲದಾಗ ಉಪವಾಸ. ಉಪವಾಸ ಅವರ ದಿನನಿತ್ಯದ ಒಡನಾಡಿಯಾಗಿತ್ತು. ಆದರೂ ಊರಿನ ಆನಂದದ ನಡುವೆ ಅತೃಪ್ತಿಯ ಸ್ವರವೆತ್ತುವ ಮನೋಭಾವ ಅವರದಾಗಿರಲಿಲ್ಲ ಹಳ್ಳಿಯ ಜೀವನ ಅವರಿಗೆ ಆ ಪಾಠ ಕಲಿಸಿತ್ತು. ಇದು ಒಂದು ರೀತಿಯಿಂದ ಒಳ್ಳೆಯಗುಣವೆಂದು ಕಂಡಿತಾಗಲಿ, ಇನ್ನೊಂದು ದೃಷ್ಟಿಯಿಂದ ಹಳ್ಳಿಗರ ಈ ಗೋಳಿಗೆಲ್ಲ ಈ ತೃಪ್ತ ಮನೋಭಾವವೇ ಮೂಲವೆಂದು ಅವನಿಗೆ ತೋರಿತು

ಸಂಜೆಯ ಚಳಿಗಾಳಿ ಕಚಗುಳಿಯಿಟ್ಟು ನಡುಗಿಸಿ ನಗಿಸುತ್ತಿದ್ದಾಗ ಜನ ಕಸ-ಕಡ್ಡಿ ಗುಡಿಸಿ ಗುಡ್ಡೆ ಹಾಕಿ ಬೆಂಕಿ ಮಾಡಿ ಅದರ ಸುತ್ತ ಕೂತು ಕತೆ ಹೇಳುವರು, ಹರಟೆ ಕೊಚ್ಚುವರು. ಇನ್ನು ಕೆಲವರು ಕೋಲಾಟ ಮಾಡುವರು. ಬರೀ ಹುಲ್ಲು, ಕಡ್ಡಿ ಇವುಗಳ ಬೆಂಕಿಯಾದ್ದರಿಂದ ಅದು ಬಹುಕಾಲ ಉರಿಯುತ್ತಿರಲಿಲ್ಲ. ಆದರೆ ಅದು ಆರಿದಾಗ ಅದನ್ನು ಬಗೆದರೆ ಒಳಗಡೆ ಚೆನ್ನಾಗಿ ಬೆಂದ ಕಡಲೆಕಾಯಿ ಅದರ ರುಚಿ ಅಮೃತಕ್ಕಿಂತ ಹೆಚ್ಚು.

ಒಂದು ದಿನ ಚಂದ್ರಶೇಖರ ಕಣದ ಬಳಿ ಸಂಚಾರ ಹೋಗುತ್ತಿದ್ದ ಪಕ್ಕದ ಕಣವೊಂದರಲ್ಲಿ ರೈತರು ಕಾಳು ಬಡಿಯುತ್ತಿದ್ದರು. ದೇವರ ಹೆಸರು ಕೂಗುವುದು, ಬಡಿಯುವುದು—ಇದೇ ಪರಿ ಸುತ್ತಣ ವಾತಾವರಣವೆಲ್ಲ ಶಬ್ದಮಯವಾಗಿತ್ತು. ಅವನು ಚಿಕ್ಕವನಿದ್ದಾಗ, ಈ ರೀತಿ ದೇವರ ಹೆಸರು ಕೂಗುವುದರ ಅರ್ಥವೇನೆಂದು ಚಂದ್ರಶೇಖರ ಒಬ್ಬ ರೈತನನ್ನು ಕೇಳಿದಾಗ, 'ಇದರರ್ತ ಏನೈತೆ? ದೇವರು ಧಾರಾಳವಾಗಿ ಫಸಲು ಕೊಡಲೀಂತ ಪ್ರಾರ್ತನೆ, ಅಷ್ಟೆ' ಎಂದು ಅವನು ನುಡಿದಿದ್ದ ಆ ಶಬ್ದ ಕೋಲಾಹಲ ಕೇಳಿದಾಗ ಚಂದ್ರಶೇಖರನಿಗೆ ಆ ಮಾತು ನೆನಪಿಗೆ ಬಂದು, ದುಃಖ-ನಗೆ ಎರಡೂ ಮೂಡಿದವು. ಭೂಮಿಗೆ ಎಲ್ಲಿ ಗಾಯವಾದೀತೋ ಎಂದು ನೇಗಿಲಿನಿಂದ ಮೇಲೆ ಕೆರೆಯುವುದು, ಸರಿಯಾಗಿ ಗೊಬ್ಬರ ಹಾಕದೆ, ಒಳ್ಳೆಯ ಧಾನ್ಯ ಬಿತ್ತದೆ, ನವೀನ ಯಂತ್ರೋಪಕರಣ ಉಪಯೋಗಿಸದೆ, ಓಬೀರಾಯನ ಕಾಲದ ಪದ್ಧತಿಯನ್ನನುಸರಿಸಿ ಬೇಸಾಯ

ಮಾಡುವುದು. ಕೊನೆಗೆ ಕಾಳು ಬಡಿಯುವಾಗ ದೇವರ ಹೆಸರಿನ ಉದ್ಗಾರ ತೆಗೆದರೆ ಭೂಮಿ ಸಮೃದ್ಧಿಯಾಗಿ ಬೆಳೆ ಕೊಡುವುದೆ?—ಎಂದು ಚಂದ್ರಶೇಖರ ಚಿಂತಿಸಿದ. ನಂಬಿಕೆಯಿರಬೇಡವೆಂದಲ್ಲ, ಅವನ ಅಭಿಪ್ರಾಯ. 'ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ' ಎಂದು ದಾಸರು ಹೇಳಿದ್ದದ್ದು ನೆನಪಿಗೆ ಬಂತು ಆದರೆ ಮೌಢ್ಯದಿಂದ ನಂಬುವುದು, ನಂಬದ್ದಕ್ಕಿಂತ ಹೆಚ್ಚು ಅನರ್ಥ—ಎಂದುಕೊಂಡ ಏನು ಮಾಡೋಣ, ಈ ಜನಕ್ಕೆ? ಅಪ್ಪ ಹಾಕಿದ ಆಲದ ಮರವೆಂದು ನೇಣು ಹಾಕಿಕೊಳ್ಳುತ್ತಾರಲ್ಲ! ಎಂದು ಸ್ವಲ್ಪ ಕಟುವಾಗಿಯೇ ಅವನ ಮನಸ್ಸಿನಲ್ಲಿ ವಿಚಾರ ಬಂತು

ಅವನು ಮನೆಗೆ ಮರಳಿದಾಗ ಸಂಜೆಯಾಗಿತ್ತು ಮೆಟ್ಟಿಲು ಹತ್ತುತ್ತಿದ್ದಾಗ ಯಾರೋ ಒಬ್ಬ ಹೆಂಗಸು ತಮ್ಮ ಮನೆಯ ಕಡೆಯೇ ಬರುತ್ತಿದ್ದದ್ದು ಕಂಡ ನಸುಕು ಕಳೆದು ಮಬ್ಬು ಕವಿಯುತ್ತಿದ್ದದ್ದರಿಂದ ಹತ್ತಿರಕ್ಕೆ ಬರುವ ವರೆಗೂ ಯಾರೆಂಬುದು ಗೊತ್ತಾಗಲಿಲ್ಲ. ನೋಡಿದಾಗ ಖಾದಿ ಕೇಂದ್ರದಲ್ಲಿ ನೂಲುತ್ತಿದ್ದ ಮುದುಕಿ ತಿಮ್ಮಕ್ಕನಾಗಿದ್ದಳು

ಅವಳ ವಯಸ್ಸು ಅರವತ್ತರ ಮೇಲಾಗಿತ್ತು. ಆದರೆ ಆಕೆಯ ಒಪ್ಪವಾದ ಕೆಲಸಕ್ಕೆ ರಾಟೆ ಒಲಿದು ಹಸನಾದ ದಾರ ಕೊಡುತ್ತಿತ್ತು.

ಅವಳು ಸೊಂಟದ ಮೇಲೆ ಇರುಕಿದ್ದ ಗೂಡೆಯಲ್ಲಿ ಏನನ್ನೋ ತಂದಿದ್ದಳು ಚಂದ್ರಶೇಖರನ ಬಳಿ ಸಾರಿ ಆಕೆ ಆ ಗೂಡೆ ಇಳಿಸಿದಳು.

'ಚಂದ್ರಪ್ಪ, ಇಕೋ, ನೀ ಕೊಟ್ಟಿದ್ದ ಐಗಳ ರಾಗಿ' ಎಂದಳು

ಚಂದ್ರಶೇಖರನಿಗೆ ಥಟ್ಟನೆ ನೆನಪು ಬರಲಿಲ್ಲ ಆಮೇಲೆ ಅವಳೇ,—

'ಒಂದ್ ದಿನ ಮನೇಲಿ ಉಣ್ಣಾಕೆ ರಾಗಿ ಇರಲಿಲ್ಲ ಅಂಗ್ಡೀಲೂ ಸಿಕ್ಲಿಲ್ಲ. ಆದಕ್ಕುಂಚೆ ಕಾಸೂ ಇಲ್ಲ, ಅಂತ ಬವಣೆ ಪಟ್ಟಾಗ, ನಂ ಕಸ್ಟ ಕೇಳಿ ದೇವರಂಗೆ ಐಗಳ ರಾಗಿ ಕೊಡ್ಲಿಲ್ವಾ? ಆ ಉಪಕಾರ ಮರೆಯೋಕಾದಾತಾ? ಬಡ ಮುಕ್ಕ ನಾ ಏನು ಮಾಡೇನು? ದೇವರು

ನಿನ್ನ, ನಿನ್ ಹೆಂಡ್ತಿ ಮಕ್ಕಳ್ನ ಚೆಂದಾಗಿ ಮಡಗ್ಲಿ. ಕೋ. ಈ ರಾಗಿ ಅಳಸ್ಕೋತೀಯಾ ನಂ ಧೊರೆಯೆ?' ಎಂದಳು.

ಆಗ ಚಂದ್ರಶೇಖರನಿಗೆ ನೆನಪಿಗೆ ಬಂತು. ಅವನು ಇದನ್ನು ಎಂದೋ ಮರೆತುಬಿಟ್ಟಿದ್ದ. ಅಲ್ಲದೆ ರಾಗಿ ಕೊಡುವಾಗ, ಮರಳಿ ಕೊಡ ಬೇಕೆಂದು ಕೂಡ ಹೇಳಿರಲಿಲ್ಲ. ಒಂದು ಪಕ್ಷ ಅವಳು ಕೊಡದೆ ಇದ್ದಿದ್ದರೂ ಅವಳಲ್ಲಿ ಅಸಮಾಧಾನ ಪಟ್ಟುಕೊಳ್ಳಲು ಸ್ವಲ್ಪವೂ ಅವಕಾಶವಿರಲಿಲ್ಲ. ಅಲ್ಲದೆ ಅವಳು ಇದನ್ನು ಹಿಂತಿರುಗಿಸುವ ಸ್ಥಿತಿಯಲ್ಲೂ ಇರಲಿಲ್ಲ ಈಗ ಹಿಂತಿರುಗಿಸಿದರೆ ಮರಳಿ ಮುಂದಿನ ವರ್ಷ ಇದೇ ಬವಣೆ. ಹಳ್ಳಿಯ ಲೇವಾದೇವಿಗಾರರು ಹಳ್ಳಿಗರ ಈ ದುಃಸ್ಥಿತಿಯ ದುರುಪಯೋಗ ಪಡಿಸಿ ಕೊಂಡು ಯಾವ ರೀತಿ ಬಡವರಿಗೆ ಸಾಲ ಕೊಟ್ಟು ಹೊಟ್ಟೆ ಬೆಳಸುತ್ತಾ ರೆನ್ನುವುದು ಆಗ ಅವನಿಗೆ ಚೆನ್ನಾಗಿ ಅರ್ಥವಾಯಿತು. ಅಂಥ ಸ್ಥಿತಿಯಲ್ಲಿ ಏನು ಬಡ್ಡಿ ಹಾಕಿದರೂ ಆ ಹಳ್ಳಿಗರು ಕೊಡಲು ಸಿದ್ಧವಾಗಿರುವುದನ್ನು ಅವನು ಚಿತ್ರಿಸಿಕೊಂಡ. ಹಾಗೆಯೇ ತಿಮ್ಮಕ್ಕ ಬಡವೆಯಾದರೂ ಆಕೆ ಮಾತುಳಿಸಿಕೊಂಡ ಪರಿ ಕಂಡು ಅವನ ಮೈ ಪುಳಕಿಸಿತು. ಕಣ್ಣಲ್ಲಿ ಆನಂದದ ಹನಿ ಉದುರಿದವು.

'ತಿಮ್ಮಕ್ಕಾ, ನೀ ವಾಪಸ್ಸು ಕೊಡಬೇಕೂ ಅಂತ ನಾ ಕೊಡಲಿಲ್ಲಾ, ಅದನ್ನ.'

'ಉಂಟಾ, ಧಣಿ? ಕೊಟ್ಟವರ ಒಡವೆ ಕೊಟ್ಟರೆ ನಂಗೇನ್ ಬಂತು ಅಂದಂಗೆ ಮಾಡೋಕಾದಾತಾ? ದೇವರು ಒಪ್ಪಾನಾ? ಅಲ್ದೆ ಇನ್ನೊಂದ್ ಧಪ ನೀ ಕೊಡೋದ್ ಬೇಡ್ವಾ?' ಎಂದು ಹಟ ಹಿಡಿದಳು ತಿಮ್ಮಕ್ಕ. ಕೊನೆಗೆ ಅವಳನ್ನು ಒಪ್ಪಿಸಿ ರಾಗಿಯೊಡನೆ ಹಿಂದಕ್ಕೆ ಕಳುಹಿಸಲು ಅವನಿಗೆ ಬಹಳ ಕಷ್ಟವಾಯಿತು ಇದರಿಂದ ಎಲ್ಲಿ ಇನ್ನೊಮ್ಮೆ ಅವಳು ಕೇಳದೆ ಹೋದಾಳೋ ಎಂದು ಕೂಡ ಅವನು ನೊಂದುಕೊಂಡ.

ಮುದುಕಿ ಹೋದ ಮೇಲೆ ಅವನ ಮನಸ್ಸು ಪುನಃ ಅಂತರ್ಮುಖಿ ಯಾಯಿತು, ಹಳ್ಳಿಯ ಬೃಹತ್ ಸಮಸ್ಯೆಯನ್ನೇ ಚಿಂತಿಸಲಾರಂಭಿಸಿತು. ಹಳ್ಳಿಯ ಜನದ ಸತ್ಯಸಂಧತೆಯಿನ್ನೂ ಅಳಿದಿಲ್ಲ. ಅವರಲ್ಲಿ ಎಲ್ಲ ಗುಣ

ಗಳೂ ಇವೆ. ಅವಗುಣಗಳೂ ಇವೆ, ನಿಜ. ಆದರೆ ಇದೇಕೆ ಈ ಸ್ಥಿತಿ? ಎಂದು ಚಿಂತಿಸಿದ.

ಹಳ್ಳಿಯ ಜನರ ಈ ಸ್ಥಿತಿಗೆ ಅವರ ಗುಣದ ಅತಿರೇಕ ಸ್ವಾರ್ಥಿಗಳ ಸಾಧನವಾಗಿ ಪರಿಣಮಿಸಿರುವುದೇ ಕಾರಣ, ಎಂದುಕೊಂಡ ಚಂದ್ರಶೇಖರ. ಈ ಮಾತು ಅತಿಯೆನಿಸಿದರೂ ಅದು ಸತ್ಯಕ್ಕೆ ತೀರ ಹೊರತೆಂದು ಒಪ್ಪಲು ಅವನು ಸಿದ್ಧನಿರಲಿಲ್ಲ

## ೧೦

ಈ ನಡುವೆ ಚಿನ್ನಯ್ಯ-ಚಂದ್ರಶೇಖರರ ನಡುವಣ ವಿರಸ ಅಧಿಕ ವಾಗುವ ಇನ್ನೊಂದು ಪ್ರಸಂಗ ಬಂದು ಹೋಗಿತ್ತು.

ಒಂದು ದಿನ ಸಂಜೆ, ಭಾದ್ರಪದ ಮಾಸದ ಮುದಿ ಬಿಸಿಲಿಗೆ ಮೈಯೊಡ್ಡಿ, ಚಿನ್ನಯ್ಯ ಮನೆಯ ಜಗುಲಿಯ ಗೋಡೆಯೊರಗಿ ಸಿಗರೇಟು ಹೊಗೆ ಎಳೆದು ಉಗುಳುತ್ತಾ ಕುಳಿತಿದ್ದ ಈಚೀಚೆಗಂತೂ, ಚಂದ್ರಶೇಖರ ನಿಗೆ ಅವಮಾನ ಮಾಡಿ ಅವನನ್ನು ಇಲ್ಲಿಂದ ಕಳಿಸುವ ವಿಚಾರವೇ ಯಾವಾಗಲೂ ಅವನ ತಲೆಯಲ್ಲಿ ಸುಳಿಯುತ್ತಾ ಇತ್ತು. ಸಿಗರೇಟಿನ ಹೊಗೆ ಸುರುಳಿ ಸುರುಳಿಯಾಗಿ ಹೊರಬಂದು ಅವನ ಸುತ್ತಲೂ ಸಣ್ಣ ಮೋಡದ ಹಾಗೆ ತೇಲಾಡುತ್ತಿತ್ತು. ಚಿನ್ನಯ್ಯ ಆರಾಮವಾಗಿ ಹೊಗೆ ಯನ್ನೇ ನಿಟ್ಟಿಸುತ್ತಾ ಈ ವಿಚಾರವನ್ನೇ ಯೋಚಿಸುತ್ತಾ ಕುಳಿತಿದ್ದ.

ಆ ವೇಳೆಗೆ ಆ ಹಳ್ಳಿಯ ಪೂಜಾರಿ ತುಂಡು ಪಂಚೆ ಸುತ್ತಿ ಮೇಲೊಂದು ಹೊದೆದು ಕಂಕುಳಲ್ಲಿ ಶಾಸ್ತ್ರದ ಕವಡೆ ಪುಸ್ತಕಗಳ ಗಂಟು ಇರುಕಿ ಗುಡಿಯ ಕಡೆಗೆ ಧಡಧಡನೆ ಓಡುತ್ತಿದ್ದ. ಅವನನ್ನು ನೋಡಿದ ಕೂಡಲೆ ಚಿನ್ನಯ್ಯನಿಗೆ ಏನೋ ವಿಚಾರ ಹೊಳೆಯಿತು. ತಕ್ಷಣ ಅವನನ್ನು ಕೂಗಿದ.

'ಹೋ! ಐನೋರೇ! ಒಸಿ ಇಲ್ಲಿ ಬಂದು ಹೋಗಿ' ಎಂದ.

ಐನೋರಿಗೆ ಮನಶ್ಶಾಸ್ತ್ರ ಬಲು ಚೆನ್ನಾಗಿ ಗೊತ್ತಿತ್ತು. ಚಿನ್ನಯ್ಯ ಕೂಗಿದ ರೀತಿಯಿಂದಲೇ ತಮ್ಮ ಬಲೆಗೆ ಒಂದು ಮೀನು ಬಿತ್ತೆಂದು ಅವರು

ನಿಷ್ಕರ್ಷಿಸಿದರು. ಚಂದ್ರಶೇಖರನಿಗೂ ಅವನಿಗೂ ವಿರಸವಿದ್ದ ವಿಚಾರ ಐನೋರಿಗೆ ಗೊತ್ತಿತ್ತು. ಇಂಥ ವಿಚಾರವೆಲ್ಲ ಎಲ್ಲರಿಗಿಂತ ಮುಂದಾಗಿ ಅವರಲ್ಲಿಗೆ ಬರುತ್ತಿತ್ತು. ಇಂಥ ವದಂತಿಗಳ ಆಧಾರದ ಮೇಲೆಯೇ ಐನೋರ ಕಸಬೆಲ್ಲಾ ನಿಂತಿದ್ದದ್ದು

'ಓಹೋ! ಏನು?....ಚಿನ್ನಯ್ಯನೋರ ಚಿತ್ತ ನನ್ನ ತಂಕ ಹರಿದದ್ದು?' ಎನ್ನುತ್ತಾ ಐನೋರು ಬಂದರು.

'ಏನಿಲ್ಲ. ಒಂದ್ ವಿಚಾರ ಹೇಳಬೇಕೂಂತಿದ್ದೆ' ಎಂದು ಚಿನ್ನಯ್ಯ ಸಣ್ಣ ದನಿಯಲ್ಲಿ ಹೇಳುತ್ತಾ ಅವರನ್ನು ಜಗಲಿಯ ಕೊನೆಯಲ್ಲಿದ್ದ ತನ್ನ ಕೋಣೆಗೆ ಕರೆದುಕೊಂಡುಹೋಗಿ ಕುಳ್ಳಿರಿಸಿ ತಾನು ಅವರ ಮುಂದೆ ಕುಳಿತ.

'ತಡಿ, ತಡಿ....ಣ್ಣ....ನಿಂಗೆ ಆಗದವರು ಯಾರೋ ನಿನ್ ಮೇಲೆ ಸಂಚು ನಡಸ್ತಾ ಅವರೆ ಅದೇ ತಾನೆ?'

ಇರಲಿ ಎಂದು ಐನೋರು ಒಂದು ಬಾಣ ಎಸೆದೇ ಬಿಟ್ಟರು.

ಚಿನ್ನಯ್ಯನಿಗೆ ಆಶ್ಚರ್ಯವಾಯಿತು. ಐನೋರ ಪ್ರತಿಭೆಯ ವಿಚಾರವನ್ನವನು ಕೇಳಿ ಬಲ್ಲ. ಆದರೆ ಇಂದು ಸ್ವತಃ ಅವರ ಕುರಿತೇಟಿ ನಂಥ ಮಾತಿನ ಅನುಭವವಾಯಿತವನಿಗೆ.

'ಮೆತ್ತಗೆ ಮಾತಾಡಿ ಐನೋರೆ....ಹೂಂ!...ಅದೇನೆ' ಎಂದು ಅವನು ಏನೋ ಹೇಳಲು ಯೋಚಿಸಿ ಹಿಂದೆಗೆದು ಮಾತು ನಿಲ್ಲಿಸಿದ.

ಐನೋರು ಒಂದು ಗಳಿಗೆ ಚಿಂತಾಮಗ್ನರಾಗಿದ್ದ ಹಾಗೆ ನಟಿಸುತ್ತ ಸುಮ್ಮನಿದ್ದರು. ಆಮೇಲೆ ಅವರೇ ಮಾತು ತೆಗೆದರು:

'ಶಾಸ್ತ್ರ ಹೇಳುತದೆ: ಯಾರೋ ಹತ್ತಿರದವರೇ ಅಂತ. ಇಲಾಯ್ತಿ ವಿದ್ಯಾನೂ ಕಲಿತವರು, ಅಂತ.'

'ಹೂಂ... ಹೂಂ... ಅವನೇ. ಅದೇ ವಿಚಾರ' ಎಂದ ಚಿನ್ನಯ್ಯ.

'ಐ! ನಾ ನಂಬೋದಿಲ್ಲ ಉಂಟಾ ಎಲ್ಲಾರೂ?... ಆದರೂ ಶಾಸ್ತ್ರ ಸುಳ್ಳು ನುಡಿಯೋದಿಲ್ಲ. ಏನೋ ಆಶ್ಚರ್ಯ ಚಿನ್ನಪ್ಪ.'

'ಏನಾರಾ ಮಾಡಿ ಅವನು ಈ ಊರು ಬಿಡೋ ಹಂಗೆ ಮಾಡ ಬೇಕಲ್ಲಾ ಐನೋರೇ. ನೀವು ಹೇಳಿದ್ದು ಕೊಡತೇನಿ. ಅವ ಇರೋ ವರೆಗೆ ನಂಗೆ ಈ ಊರಲ್ಲಿ ಮರ್ಯಾದೆ ಇಲ್ಲ' ಎಂದು ಚಿನ್ನಯ್ಯ ಮೆಲುದನಿ ಯಲ್ಲಿ ಹೇಳಿದ. ಯಾರಾದರೂ ತಮ್ಮ ಮಾತು ಕೇಳಿಯಾರು ಎಂದು ಆ ಕಡೆ ಈ ಕಡೆ ನೋಡಿದ. ಯಾರೂ ಇರಲಿಲ್ಲ.

ಐನೋರು ಒಂದು ಗಳಿಗೆ ಮಾತಾಡಲಿಲ್ಲ. ಚಿನ್ನಯ್ಯನಿಗೆ ಆಶೆ-ಭಯ-ಶಂಕೆ-ಉದ್ವೇಗಗಳು ತಾಕಲಾಡಿದವು. ಈ ಎಲ್ಲ ಭಾವಗಳೂ ಅವನ ಮುಖದ ಮೇಲೆ ಮಿಂಚಿ ಮಾಯವಾಗುತ್ತಿದ್ದವು ಈ ವಿಚಾರವನ್ನು ಐನೋರ ಮುಂದೆ ಎತ್ತಬಾರದಾಗಿತ್ತು ಎನಿಸಿತು. ಅವರೇನಾದರೂ ಇದನ್ನು ನಿರಾಕರಿಸಿದರೆ, ಅಥವಾ ಇನ್ನೊಬ್ಬರಿಗೆ ತಿಳಿಸಿದರೆ ಏನು ಗತಿ, ಎನಿಸಿತವನಿಗೆ. ಆದರೆ ಅವರಿಗೆ ಹಣದ ಆಸೆ ತೋರಿಸಿದ್ದರಿಂದ ಅದಕ್ಕೆ ಆಕರ್ಷಿಸಲ್ಪಟ್ಟು ತನ್ನ ಕೆಲಸ ಹೇಗಾದರೂ ಸಾಧಿಸಿಯೇ ಕೊಟ್ಟಾರೆಂಬ ನಂಬಿಕೆಯೊಂದು ಅವನಿಗೆ ಸಮಾಧಾನ ತಂದಿತು.

ಐನೋರು ಮುಚ್ಚಿದ್ದ ಕಣ್ಣು ತೆರೆದು ಮೆಲ್ಲಗೆ ಮಾತಾಡಿದರು. ಇರಲಿ, ನಾ ನೋಡಿಕೋತೀನಿ. ಚಂದ್ರಶೇಖರ ಇಲ್ಲಿರೋದು ಊರಿಗೆ ಒಳ್ಳೇದಲ್ಲ. ಏನೋ ಶನಿ ಕಾದೈತೆ, ಅಂತ ದೇವರ್‍ನೂ ಗೊತ್ತಾಗದೆ. ನಿನ್ನೆ ನಂ ಕನಸ್ನಲ್ಲೂ ಸ್ವಾಮಿ ಕಾಣಿಸಿಕೊಂಡಿದ್ದ. ಈವತ್ತು ನಾನಾಗೇ ಊರಗೌಡನಾದ ನಿನ್ ಮುಂದೆ ಈ ಮಾತು ತೆಗೆಯೋಣ ಅಂತಿದ್ದೆ. ನೀನೇ ಕರೆದು ಕೇಳ್ದೆ. ಒಳ್ಳೇದಾಯ್ತು. ಇರಲಿ, ನೋಡಾನ. ಮುಂದಿನ ಮಾರ್‍ನೋಮಿ ಇನ್ನೇನು ತುಂಬಾ ದಿನಾ ಉಳಿದಿಲ್ಲ. ಅವ ಈ ಊರ್‍ನಲ್ಲಿ ಇರಬಹುದೋ ಬಾರದೋ ಅನ್ನೋದನ್ನ ದೇವರೇ ನಾಕು ಜನದ ಮುಂದೆ ಹೇಳ್ತಾನೆ.'

ಚಿನ್ನಯ್ಯನ ಹಿಗ್ಗು ಮೇರೆ ಮೀರಿತು. 'ಅಷ್ಟು ಮಾಡಲಿ. ಅಷ್ಟು ಮಾಡಲಿ. ದೇವರೇ ತೀರ್ಮಾನ ಮಾಡಲಿ! ಎಂದು ಹೇಳಿದ ಬೆರಳ ಸಂದಿನಲ್ಲಿ ಹಿಡಿದಿದ್ದ ಸಿಗರೇಟಿನ ತುಂಡು ಉರಿಯುತ್ತಾ ಬಂದು ಆ ವೇಳೆಗೆ

ಸರಿಯಾಗಿ ಅವನ ಬೆರಳು ಸುಟ್ಟಿತು. ಅದನ್ನವನು ಸಂಪೂರ್ಣವಾಗಿ ಮರೆತಿದ್ದ. ಸರಕ್ಕನೆ ಊರಿದ್ದ ಕೈಯನ್ನೆತ್ತಿ ಸಿಗರೇಟನ್ನು ಆಚೆಗೆ ಬಿಸಾಡಿದ 'ಇಗೋ, ಬಂದುಬಿಟ್ಟೆ' ಎಂದು ಹೇಳಿ ಒಳಗೆ ಹೋದ. ಬರುವಾಗ ಐನೋರಿಗೆ ಒಂದು ತಟ್ಟೆಯಲ್ಲಿ ತಾಂಬೂಲ, ತೆಂಗಿನ ಕಾಯಿ ಅದರ ಅಡಿಯಲ್ಲಿ 'ಅಲ್ಪ ಕಾಣಿಕೆ'

ಇದಾದ ಸ್ವಲ್ಪ ದಿನವಲ್ಲೇ ನಿರೀಕ್ಷಿಸಿದ್ದ ಮಹಾ ನವಮಿ ಹಬ್ಬವೂ ಬಂತು. ಹಬ್ಬದ ದಿನವಸಂಜೆಯು ಮಂಗಳಾರತಿಗೆ ಊರ ಜನವೆಲ್ಲ ದೇವ ಸ್ಥಾನದಲ್ಲಿ ಸೇರುವ ಪದ್ಧತಿ ಸಾವಮಾನ್ಯವಾಗಿ ಅಂಥ ಸಂದರ್ಭದಲ್ಲಿ ಯಾರ ಮೈಮೇಲಾದರೂ ದೇವರು ಬರುತ್ತಿದ್ದದ್ದೂ ಉಂಟು. ಆ ಊರಿಗೆ ಬರಲಿದ್ದ ಕುತ್ತನ್ನು ದೇವರು ಆ ರೀತಿ ಮುಂದಾಗಿ ತಿಳಿಸುತ್ತಿದ್ದ. ಆಗ ಯಾರಾದರೂ ತಮ್ಮ ಕಷ್ಟವನ್ನು ಅರಿಕೆ ಮಾಡಿಕೊಂಡರೂ ಕೂಡ ದೇವರು ಅಂಥ ಅರಿಕೆಗಳಿಗೆ ಸೂಕ್ತ ಉತ್ತರ ಕೊಡುತ್ತಿದ್ದ. ಇಂಥ ಪ್ರಶ್ನೆ ಗಳಿಗೆ ಉತ್ತರ ಪಡೆದದ್ದಕ್ಕೆ ಕೃತಜ್ಞತಾರ್ಥವಾಗಿ ಅಂಥವರು ದೇವರಿಗೆ ಕಾಣಿಕೆ ಸಲ್ಲಿಸುತ್ತಿದ್ದರು. ಈ ಕಾಣಿಕೆಯೆಲ್ಲ ಪೂಜಾರಿಗೆ ಹೋಗುತ್ತಿತ್ತು.

ಅಂದೂ ಕೂಡ ಅಲ್ಲಿ ಸೇರಿದ್ದ ಜನವೆಲ್ಲ ಈ ಸಾರಿ ಊರಿಗೆ ಏನು ಕಾದಿದೆಯೋ, ದೇವರು ಏನು ಹೇಳುತ್ತಾನೋ ಎಂದು ಕಾದಿದ್ದರು. ಸಾಮಾನ್ಯವಾಗಿ ದೇವಸ್ಥಾನದ ಕಾವಲುಗಾರನಾಗಿದ್ದ ಮಾರನಿಗೇ ದೇವರು ಬರುತ್ತಿದ್ದದ್ದು ಇನ್ನೇನು ಪೂಜೆಯೆಲ್ಲ ಆಗಿ ಮಂಗಳಾರತಿಯಾಗಬೇಕು. ಆಗ ದೇವಸ್ಥಾನದ ಮುಂದಿನ ಗರುಡಗಂಬದಲ್ಲಿಂದ 'ಹೋ! ಹೋ!... ಹ್ರೀಂ... ಹ್ರಾಂ... ಹ್ರಾಂ...' ಎಂಬ ಕೂಗು ಬಂತು ಮಾರನ ಕೂಗು ಅದು. ಮಾರನಿಗೆ ದೇವರು ಬಂದಿತ್ತು.

'ಅಪ್ಪಾ, ನಮ್ಮಪ್ಪಾ, ಸ್ವಾಮೀ.. ' ಎನ್ನುತ್ತಾ ಪೂಜಾರಿ ಅವನ ಬಳಿಗೆ ಓಡಿದ ಅಲ್ಲೇ ಇದ್ದ ಚಿನ್ನಯ್ಯನೂ ಅವನನ್ನು ಹಿಂಬಾಲಿಸಿದ. ಚಂದ್ರಶೇಖರ ಅಲ್ಲಿಗೆ ಬಂದಿರಲಿಲ್ಲ.

'ಬಂತು .. ಬಂತು... ಊರಿಗೆ. . ಬರಬಾರದ್ದು . ಬಂತು.' ಎಂದು ಮಾರ ಆವೇಶದಿಂದ ನುಡಿದ.

'ಅಯ್ಯೋ! ಬೇಡ ನಮ್ಮಪ್ಪ....' ಎಂದು ನಾಲ್ಕಾರು ಜನ ಮೊರೆಯಿಟ್ಟರು.

'ಚಂದ್ರ.... ಚಂದ್ರಶೇಖರ.... ಅನ್ಯಾಯ.... ಊರು ಬಿಟ್ಟು ತೊಲಗಬೇಕು.'

'ಆಂ?.... ಏನು? ಏನು?' ಎಂದ, ಪೂಜಾರಿ.

ಹೀಗೆಯೇ ಅರ್ಧರ್ಧ ಮಾತಿನಲ್ಲಿ ಮಾರ ಚಂದ್ರಶೇಖರನಿಗೆ ವಿರುದ್ಧ ವಾಗಿ ತೀರ್ಪು ನುಡಿದ.

ಮರು ದಿನ ಊರಲ್ಲೆಲ್ಲ ಇದೇ ಮಾತು. ಚಂದ್ರಶೇಖರ ಊರಿಗೆ ಬಂದು ಮಾಡಬಾರದ್ದನ್ನೆಲ್ಲ ಮಾಡುತ್ತಿದಾನೆ. ಆದ್ದರಿಂದ ಊರಿಗೆ ಒಳ್ಳೆಯದಲ್ಲ. ಅವನು ಊರು ಬಿಟ್ಟು ಹೊರಡಬೇಕೆಂದು ದೇವರೇ ಹೇಳಿದೆ, ಎಂದು ಎಲ್ಲರೂ ಎನ್ನತೊಡಗಿದರು. ಅವನಲ್ಲಿ ಹಿಂದೆ ವಿಶ್ವಾಸ ವಿಟ್ಟಿದ್ದವರಲ್ಲೂ ಎಷ್ಟೋ ಮಂದಿ ಈಗ ಅವನತ್ತ ಸಂಶಯದಿಂದ ನೋಡ ಲಾರಂಭಿಸಿದರು. ಗೌಡರ ಮಗನಾದರೇನು? ದೇವರು ಹೇಳಿದ ಮೇಲೆ ಸುಮ್ಮನಿರಲಾಗದು ಊರಿನ ಒಳ್ಳೆಯುದಕ್ಕಾಗಿ ಅವನು ಊರು ಬಿಡ ಬೇಕು—-ಎಂದು ಎಷ್ಟೋ ಜನ ಒತ್ತಾಯ ಪಡಿಸಲಾರಂಭಿಸಿದರು.

ಚಂದ್ರಶೇಖರ ಒಪ್ಪಲಿಲ್ಲ. ಇಲ್ಲಿ ಯಾರದೋ ಕೈವಾಡವಿದೆಯೆಂದು ಅವನಿಗೆ ಮನವರಿಕೆಯಾಗಿತ್ತು ಆದರೆ ಊರ ಜನರ ಅಂಧಶ್ರದ್ಧೆಯನ್ನು ಅವನು ಕದಲಿಸಲಾರದವನಾಗಿದ್ದ. ಏನಾದರಾಗಲಿ, ನಾನು ಊರು ಬಿಡುವುದಿಲ್ಲ ಎಂದು ದೃಢಪ್ರತಿಜ್ಞೆ ಮಾಡಿದ. ನನ್ನನ್ನು ಕೊಂದರೂ ಸರಿಯೆ. ನಾ ಇಲ್ಲಿಂದ ಕದಲುವುದಿಲ್ಲ, ಎಂದ. ಇದರಿಂದ ಊರಿನಲ್ಲಿ ವಿರೋಧದ ಸುಂಟರಗಾಳಿಯೇ ಬೀಸಿತು.

ಚಿನ್ನಯ್ಯನ ಮುಖವಂತೂ ಹೆಮ್ಮೆಯಿಂದ ಬೀಗಿತು 'ಹಳ್ಳಿಯ ಉದ್ಧಾರಾನಂತೆ, ಉದ್ಧಾರ! ತಾತ ಮುತ್ತಾತಂದಿರ ಕಾಲದಿಂದ ಕಾಣ ದ್ದನ್ನ ಮಾಡೋಕೆ ಹೋದರೆ ದೇವರು ಸಹಿಸಾನಾ?' ಎಂದು ಹೇಳ ಲಾರಂಭಿಸಿದ.

ಚಂದ್ರಶೇಖರನಿಗೆ ಇವನ ತಾತ್ಸಾರವೂ ಊರಿನವರ ನಡತೆಯೂ ತುಂಬ ನೋವನ್ನುಂಟುಮಾಡಿದವು. ಆದರೆ ಅವನು ವಿಚಲಿತಮನ ನಾಗಲಿಲ್ಲ.

ಒಂದು ದಿನ ಸಂಜೆ ಅವನೂ ನರಸಿಂಹಯ್ಯನವರೂ ಇದೇ ವಿಚಾರ ಮಾತಾಡುತ್ತಾ ಊರ ಹೊರಗೆ ಸಂಚಾರ ಹೊರಟಿದ್ದರು. ಚಂದ್ರಶೇಖರನಿಗೆ ಊರಿನ ವಿರೋಧ ಅತಿಯಾಗಿತ್ತು. ಮುಂದಿನ ದಾರಿಯೇನೆಂದು ಚಿಂತಿಸುತ್ತಾ ಊರ ಹೊರಗಿನ ಒಂದು ಬಂಡೆಯ ಮೇಲೆ ಕುಳಿತರು. ಚಂದ್ರಶೇಖರನ ತಂದೆ ಕೂಡ 'ದೇವರ' ಈ ಮಾತನ್ನು ಸುಳ್ಳೆನ್ನಲು ಒಪ್ಪಲಿಲ್ಲ. ಅವರು ಕೂಡ ಚಂದ್ರಶೇಖರ ಇನ್ನು ಮೇಲೆ ಈ ಕೆಲಸವನ್ನು ಸಾಕು ಮಾಡಬೇಕೆಂದೂ, ತಮ್ಮಿಂದ ಇದಕ್ಕೆ ಇನ್ನು ಪ್ರೋತ್ಸಾಹ ದೊರಕಲಾರದೆಂದೂ ಹೇಳಿದ್ದರು. ಉಪಾಧ್ಯಾಯ ನರಸಿಂಹಯ್ಯನವರೊಬ್ಬರು ಮಾತ್ರ ಇವನ ಪರವಾಗಿ ವಾದಿಸುತ್ತಿದ್ದರು. ಆದರೆ ಅವರೊಬ್ಬರು ಏನು ಮಾಡಲಾದೀತು?

ಯೋಚನೆ ಬಗೆಹರಿಯಲಿಲ್ಲ ಸಂಜೆ ಮಾತ್ರ ಜಾರಿ ಕಪ್ಪುಗತ್ತಲು ಮೂಡಿತು.

ಚಂದ್ರಶೇಖರನೂ ನರಸಿಂಹಯ್ಯನೂ ಭಾರವಾದ ಹೃದಯದಿಂದ ಮನೆ ಕಡೆ ಮರಳಿದರು. ಅವರ ಮನಸ್ಸು ಎಲ್ಲೋ ಇತ್ತು. ಕಾಲುಗಳು ಮಾತ್ರ ತಮ್ಮ ಕೆಲಸವನ್ನು ತಾವು ಮಾಡುತ್ತಿದ್ದವು.

ಇದ್ದಕ್ಕಿದ್ದ ಹಾಗೆಯೇ ಚಂದ್ರಶೇಖರ ಏನನ್ನೋ ಎಡವಿದ ಹಾಗಾಯಿತು. ಥಟ್ಟನೆ ನಿಂತ ಇಬ್ಬರೂ ಬಾಗಿನೋಡಿದರು: ಯಾವುದೋ ಮನುಷ್ಯದೇಹ; ಅಂಗತ್ತನಾಗಿ ಬಿದ್ದಿತ್ತು.

ನರಸಿಂಹಯ್ಯ ಆ ದೇಹದ ಕೈಹಿಡಿದು ನಾಡಿ ಪರೀಕ್ಷಿಸಿದರು. ಜೀವವಿತ್ತು; ಆದರೆ ಜ್ಞಾನ ತಪ್ಪಿತ್ತು. ರಸ್ತೆಯ ಕಲ್ಲೊಂದಕ್ಕೆ ತಲೆ ಬಡಿದು ರಕ್ತ ಚೆಲ್ಲಿ ದೂಳು ಕೆಸರಾಗಿತ್ತು.

ಕೂಡಲೇ ಚಂದ್ರಶೇಖರ ಹತ್ತಿರದಲ್ಲಿದ್ದ ಕೆರೆಗೆ ಓಡಿದ. ಕೈಯಲ್ಲೇನೂ ಪಾತ್ರೆಯಿರಲಿಲ್ಲ. ಹೊದೆದಿದ್ದ ಧೋತರವನ್ನೇ ನೀರಿನಲ್ಲಿ

ಅದ್ದಿ ತಂದ ನರಸಿಂಹಯ್ಯನೂ ಅವನೂ ಸ್ವಲ್ಪ ಹೊತ್ತು ಶುಶ್ರೂಷೆ ಮಾಡಿದ ಮೇಲೆ ಆತನಿಗೆ ಸ್ವಲ್ಪ ಪ್ರಜ್ಞೆ ಬಂತು. ಚಂದ್ರಶೇಖರ ಕೂಡಲೇ ಊರಿಗೆ ಓಡಿ ಒಂದು ಗಾಡಿ ಹೊಡೆಯಿಸಿಕೊಂಡು ಬಂದ. ಗಾಡಿಯ ಲಾಂದ್ರದ ಬೆಳಕಿನಲ್ಲಿ ಪರೀಕ್ಷಿಸಿದಾಗ ಅವನು ಮಾರನಾಗಿದ್ದ!

ನರಸಿಂಹಯ್ಯನೂ ಚಂದ್ರಶೇಖರನೂ ಸೇರಿ ಅವನನ್ನು ಗಾಡಿಯಲ್ಲಿ ಮಲಗಿಸಿದರು.

ಅಂದು ರಾತ್ರಿ ನರಸಿಂಹಯ್ಯನವರೂ ಚಂದ್ರಶೇಖರನೂ ಅವನ ಗಾಯಕ್ಕೆ ತಕ್ಕ ಔಷಧ ಹಾಕಿ ಕಟ್ಟಿದರು. ಅವರು ತೆರೆದಿದ್ದ ಚಿಕ್ಕ ಔಷಧಾಲಯದಲ್ಲಿ ಇದಕ್ಕೆ ಬೇಕಾದ ಔಷಧವಿತ್ತು. ಗಾಯವೂ ಅಷ್ಟೇನೂ ಅಪಾಯಕರವಾಗಿರಲಿಲ್ಲ. ಒಂದು ವಾರದೊಳಗೆ ಮಾಯುತ್ತಾ ಬಂತು.

ಚಂದ್ರಶೇಖರನಿಗೆ ವಿರುದ್ಧವಾಗಿ ತೀರ್ಪು ಹೇಳಿದ್ದ ತನ್ನನ್ನು ಚಂದ್ರ ಶೇಖರ ಉಪಚರಿಸುತ್ತಿದ್ದ ರೀತಿಯನ್ನು ನೋಡಿ ಮಾರನಿಗೆ ತನ್ನ ಹಿಂದಿನ ಕಾರ್ಯಕ್ಕಾಗಿ ಮನಸ್ಸಿನಲ್ಲೇ ನಾಚಿಕೆಯಾಗಿತ್ತು. ಚಂದ್ರಶೇಖರನ ಒಳ್ಳೆಯ ಗುಣಕ್ಕೆ ಅವನು ಮಾರುಹೋದ. ಆ ರಾತ್ರಿಯಲ್ಲಿ, ಲಾಂದ್ರದ ಹಣ್ಣು ಬೆಳಕಿನಲ್ಲಿ ಚಂದ್ರಶೇಖರ ಅವನ ಕಣ್ಣಿಗೆ ದೇವತೆಯಾಗಿ ಕಂಡ. ಇವನ ವಿಚಾರವಾಗಿಯೇ ತಾನು ಆ ರೀತಿ ನಡೆದದ್ದು! ಥೂ! ಹಾಳು ಹಣ ದಾಸೆಗಾಗಿ ತಾನು ಎಂಥ ಕೆಲಸ ಮಾಡಿದ್ದ!

ಚಂದ್ರಶೇಖರನ ವಿರುದ್ಧವಾಗಿ ತೀರ್ಪು ನುಡಿದದ್ದಕ್ಕೆ ಪ್ರತಿಫಲ ವಾಗಿ ಚಿನ್ನಯ್ಯನಿಂದ ಪೂಜಾರಿಯ ಮುಖಾಂತರವಾಗಿ ಆ ದಿವಸ ಹಣ ಬಂದು ಮಾರನ ಕೈ ಬೆಚ್ಚಗಾಗಿತ್ತು. ಮೈಯನ್ನೂ ಬೆಚ್ಚಗೆ ಮಾಡಿ ಕೊಳ್ಳೋಣವೆಂದು ಮಾರನ ಸವಾರಿ ಪಕ್ಕದ ಹಳ್ಳಿಯ ಪಡಖಾನೆಗೆ ಚಿತ್ತೈಸಿತ್ತು. ಕೈಲಿದ್ದ ಎರಡು ರೂಪಾಯಿಗೂ ಕುಡಿದು ತೂರಾಡುತ್ತಾ ಮನೆ ಕಡೆ ಹೊರಟಿದ್ದ. ದಾರಿಯಲ್ಲಿ ಎಡವಿ ಬಿದ್ದ. ರಸ್ತೆಯಲ್ಲಿ ಚೂಪಾಗಿ ಎದ್ದು ನಿಂತಿದ್ದ ಒಂದು ಕಲ್ಲಿಗೆ ಹಣೆ ತಾಕಿತ್ತು.

ಪ್ರತಿದಿನವೂ ಚಂದ್ರಶೇಖರ ಅವನ ಗಾಯದ ಪಟ್ಟಿ ಬಿಚ್ಚಿ, ಔಷಧ ಹಾಕಿ ಕಟ್ಟುತ್ತಿದ್ದ. ಕೊನೆಗೆ ಗಾಯ ಸಂಪೂರ್ಣವಾಗಿ ಗುಣವಾಯಿತು. ಚಂದ್ರಶೇಖರ ನೋಡಿ ಇನ್ನು ಔಷಧ ಸಾಕು ಎಂದ.

ಮಾರನ ಕಣ್ಣು ಕೃತಜ್ಞತೆಯಿಂದ ನೀರೊಸರಿಸಿತು. ಅವನ ಹೃದಯ ಪಶ್ಚಾತ್ತಾಪದಿಂದ ಬೆಂದುಹೋಗಿತ್ತು.

ತಾ ಮಾಡಿದ ಎಸಕವನ್ನು ಕಣ್ಣೀರಿನ ಕೋಡಿ ಹರಿಯಿಸುತ್ತಾ ಚಂದ್ರಶೇಖರನಿಗೆ ಹೇಳಿಕೊಂಡ. 'ನಿಂಗೆ ಅಪರಾಧ ಮಾಡಿದೆ. ಕ್ಷಮಿಸ್ಸು ಚಂದ್ರಪ್ಪ' ಎಂದು ಅವನ ಕಾಲಿಗೆ ಬೀಳಲು ಹೋದ.

ಚಂದ್ರಶೇಖರ ಅವನನ್ನು ತಡೆದು ನಿಲ್ಲಿಸಿದ. ಚಂದ್ರಶೇಖರನ ಮನಸ್ಸು ಕರಗಿಹೋಗಿತ್ತು. ಚಿನ್ನಯ್ಯ ಇಂಥ ಕೆಲಸ ಮಾಡಿಯಾನೆಂದು ಅವನು ನೆನೆದಿರಲಿಲ್ಲ. ಕೂಡಲೇ ಅವನಿಗೆ ದುಃಖ—ಕನಿಕರಗಳು ಒತ್ತರಿಸಿ ಬಂದವು

ಇದಾದ ಸ್ವಲ್ಪ ದಿನಕ್ಕೇ ದೀವಳಿಗೆ ಬಂತು. ಅಂದು ಮತ್ತೆ ಮಾರನ ಮೇಲೆ ದೇವರು ಬಂತು. 'ಚಂದ್ರ ನನ್ನ ಭಕ್ತ. ಅವನ್ನ ಪರೀಕ್ಷೆ ಮಾಡೋಕೆ ಹಾಗೆಲ್ಲ ಹೇಳಿದೆ. ಇನ್ನು ಮೇಲೆ ಎಲ್ಲರೂ ಅವನು ಹೇಳಿದ ಹಾಗೆ ಕೇಳಬೇಕು'—ಎಂದು ದೇವರು ತೀರ್ಪು ನುಡಿದ!

ಇದನ್ನು ಕೇಳಿ ಪೂಜಾರಿ ಬೆಚ್ಚಿದ. ಈಚೆಗೆ ಮಾರನಿಗೆ ಚಂದ್ರಶೇಖರ ಶುಶ್ರೂಷೆ ಮಾಡಿದ್ದ ವಿಚಾರ ಅವನಿಗೆ ಗೊತ್ತಾದಾಗಲೇ ಏನೋ ಅಚಾತುರ್ಯ ನಡೆಯುವುದೆಂದು ಅವನು ಲೆಕ್ಕ ಹಾಕಿದ್ದ.

ಮರುದಿನದಿಂದ ಊರವರಿಗೆ ಚಂದ್ರಶೇಖರನ ಮೇಲಿದ್ದ ವಿರೋಧ ಬಹು ಪಾಲು ಕರಗಿತು. ಚಿನ್ನಯ್ಯ ಮಾತ್ರ ಹಲ್ಲು ಮುರಿದ ಹಾವಿನ ಹಾಗೆ ಬುಸುಗುಟ್ಟಲಾರಂಭಿಸಿದ.

ಆದರೆ ಮಾರ ಈ ಎರಡನೆಯ ಸಲ ದೇವರು ಬರಿಸಿಕೊಂಡಿದ್ದನ್ನು ಚಂದ್ರಶೇಖರ ಒಪ್ಪಲಿಲ್ಲ. ತಾನು ಮಾಡುತ್ತಿರುವ ಕೆಲಸ ಸರಿಯಾಗಿದ್ದರೆ ಜನ ತಾವಾಗಿಯೇ ಒಲಿಯುತ್ತಾರೆ. ಮಾರ ಈ ರೀತಿ ಮಾಡಬಾರ

ದಾಗಿತ್ತು—ಎಂದು ಒಂದು ದಿನ ಮಾರನೆದುರಿಗೆ ನರಸಿಂಹಯ್ಯನವರಿಗೆ ನುಡಿದ. ಮಾರನೀಗ ಅವರ ಪಟ್ಟಶಿಷ್ಯರಲ್ಲೊಬ್ಬನಾಗಿದ್ದ. ಅಕ್ಷರವನ್ನೂ ಕಲಿಯಲು ಮೊದಲಿಟ್ಟಿದ್ದ.

'ಉಂಟಾ, ಚಂದ್ರಪ್ಪ? ಹಂಗ್ ಮಾಡದೇ ಇದ್ದರೆ ನಾ ಹಿಂದೆ ಹೇಳಿದ್ದ ಸುಳ್ಳಿಂದ ಬಚಾವಾಗ್ತಾ ಇದ್ದದ್ದು ಹೆಂಗೆ?' ಎಂದು ಮಾರ ವಾದಿಸಿದ

ನರಸಿಂಹಯ್ಯನವರೂ ಕೂಡ, 'ಹೋಗಲಿ, ಬಿಡಿ. ದಾರಿ ಯಾವುದಾದರೇನು? ಅದರಿಂದ ಒಳ್ಳೆಯದಾದರೆ ಸರಿಯಾಯಿತಲ್ಲ. ಮೂಢನಂಬಿಕೆಯವರನ್ನ ಮೂಢನಂಬಿಕೆಯ ಮೂಲಕವೇ ಗೆಲ್ಲಬೇಕು' ಎಂದರು.

ಚಂದ್ರಶೇಖರ ಮಾತಾಡಲಿಲ್ಲ. ಅವನ ಮನಸ್ಸು ಯಾವುದೋ ಅವ್ಯಕ್ತದ ಮಡಿಲಲ್ಲಿ ತೂಗಾಡುತ್ತಿತ್ತು.

೧೧

ಸುಗ್ಗಿಯ ಸಂಭ್ರಮವೆಲ್ಲ ಕಳೆದ ಮೇಲೆ ಊರಿನ ನಾಟಕತಂಡದ ಉರವಣೆ ಪ್ರಾರಂಭವಾಯಿತು. ಚಂದ್ರಶೇಖರ ರಾತ್ರಿ ಶಾಲೆ ಮುಗಿಸಿಕೊಂಡು ಹೊರಡುವ ವೇಳೆಗೆ ಹಳ್ಳಿಯ ಯುವಕರು ಪ್ರಾರಂಭಿಸುತ್ತಿದ್ದ 'ಪ್ರಾಕ್ಟೀಸು' ರಾತ್ರಿ ಸರಿಹೊತ್ತಿನವರೆಗೂ ನಡೆಯುತ್ತಿತ್ತು. ಪಕ್ಕದೂರಿನ ಆಚಾರ್ರಿಗಂತೂ ಪುರಸೊತ್ತೇ ಇರಲಿಲ್ಲ. ದಪ್ಪನಾದ ಶರೀರದ ಮೇಲೆ ಬಿಗಿಯಾದ ಮಲ್ಲಿನ ಅಂಗಿ. ಮುಖದ ಮೇಲೆ ಎದ್ದುಕಾಣುವ ಸದೃಢವಾದ ಮೂಗು. ಅಗಲವಾದ ಹಣೆ. ಒತ್ತಾಗಿ ಬಾಚಿ ಹಿಂದೆ ಬಿಗಿದ ದಪ್ಪ ಗಂಟು. ಹಿಂದೆ ಸೀತೆಯ ಪಾರ್ಟು ಹಾಕುತ್ತಿದ್ದರಂತೆ. ಈಗ ಹಿಡಂಬಿಯ ಪಾತ್ರಕ್ಕೆ ಮಾತ್ರ ಲಾಯಕ್ಕು ಆದರೆ ಈಗ ವೇಷ ಹಾಕುವುದು ಬಿಟ್ಟು ಸುತ್ತಲ ಹಳ್ಳಿಗಳ ನಾಟಕದ ಷೋಕಿಯವರಿಗೆ ನಾಟ್ಯಾಚಾರ್ಯರಾಗಿದ್ದರು. ಅವರ ದಪ್ಪ ಗಂಟಲು ಊರನ್ನೆಲ್ಲಾ ಎಚ್ಚರವಾಗಿರಿಸುತ್ತಿತ್ತು. ಹೀಗೆ ಸಂತತವಾದ 'ಪ್ರಾಕ್ಟಿಸಾ'ಯಿತು. ಸಂಕ್ರಾಂತಿಯ ದಿನ ಸಂಜೆ ದನಗಳು ಕಿಚ್ಚು

ಹಾಯ್ದು ಮೇಲೆ ಊರ ಗುಡಿಯ ಮಗ್ಗುಲಲ್ಲಿ ತೆರವಾದ ಜಾಗದಲ್ಲಿ ಇದಕ್ಕಾಗಿ ಹಾಕಿದ್ದ ಚಪ್ಪರದಲ್ಲಿ ನಾಟಕ ಹಾಕಿಯೇ ಬಿಟ್ಟರು ಅಹಿ ರಾವಣ-ಮಹಿರಾವಣ ಕಾಳಗ. ಆ ಸುತ್ತಿಗೇ ಹೊಸ ನಾಟಕ. ಆಚಾರ್ರೇ ಸ್ವತಃ ಬರೆದು ಹಾಡು ಕಟ್ಟಿ ಕಲಿಸಿದ್ದು ಆ ನಾಟಕ ಆಡಿದ ರೀತಿ ಬಲು ಸರಳವಾಗಿತ್ತು. ಜೀವನವೇ ಬೇಸರವಾಗಿ ಆತ್ಮಹತ್ಯ ಮಾಡಿಕೊಳ್ಳಲಿದ್ದ ವರು ಕೂಡ ಈ ನಾಟಕ ನೋಡಿದ್ದರೆ ನಕ್ಕು ಹೊಟ್ಟೆ ಹುಣ್ಣಾಗಿ, 'ಜೀವನವು ಸುಖ; ಜೀವನವು ಭವ್ಯ' ಎನ್ನುತ್ತಿದ್ದರು.

ಇದನ್ನು ನೋಡಿದಾಗ ಚಂದ್ರಶೇಖರನಿಗೆ ಈ ನಾಟಕತಂಡದವರ ಸಹಾಯ ಪಡೆದು ಹಳ್ಳಿಯ ಸಮಸ್ಯೆಗಳಿಗೆ, ಜನಜೀವನಕ್ಕೆ ಸಂಬಂಧಿಸಿದ ನಾಟಕ ಕಟ್ಟಿ ಏಕೆ ಆಡಿಸಬಾರದು, ಎನಿಸಿತು. ಆದರೆ ಇವರು ಪುರಾಣ ಕಥೆ ಬಿಟ್ಟು ಇಂಥ ನಾಟಕ ಆಡಲು ಒಪ್ಪಿಯಾರೇ ಎನಿಸಿತು. ಆದರೆ ಅವರು ತನ್ನ ಮಾತು ತೆಗೆದುಹಾಕಲಾರರು, ಎಂದುಕೊಂಡ. ಮರು ದಿನವೇ ಈ ಮಾತನ್ನೆತ್ತಬೇಕೆಂದೂ ತೀರ್ಮಾನಿಸಿದ.

ಮನೆಗೆ ಮರಳುವಾಗ ಇದೇ ವಿಚಾರವೇ ಅವನ ತಲೆಯಲ್ಲಿ ನಡೆದಿತ್ತು ಕಥೆ ಯಾವ ರೀತಿ ಇರಬೇಕು. ಯಾವ ಯಾವ ಸಮಸ್ಯೆ ಗಳನ್ನು ಅದರಲ್ಲಿ ಎತ್ತಿ ಹಿಡಿಯಬೇಕು ಎಂಬೆಲ್ಲ ವಿಚಾರದಲ್ಲೇ ಮನೆಗೆ ಬಂದು ಮಲಗಿದ

ರಾತ್ರಿ ನಿದ್ದೆ ಕೆಟ್ಟದ್ದರಿಂದ ಬೆಳಗ್ಗೆ ಒಂಬತ್ತು ಗಂಟೆಯಾಗಿದ್ದರೂ ಚಂದ್ರಶೇಖರನಿಗೆ ಎಚ್ಚರವಾಗಲಿಲ್ಲ. ತಾಯಿಯೂ ಕೂಡ, ಮಲಗಿರಲಿ ಎಂದುಕೊಂಡು ಎಬ್ಬಿಸುವ ಗೋಜಿಗೆ ಹೋಗಲಿಲ್ಲ. ಎಚ್ಚರವಾಗಿ ಕಣ್ಣು ತೆರೆದಾಗ ಚಿನ್ನಯ್ಯನ ಮನೆಯ ಆಳು ಬಂದಿದ್ದ.

ಚೆನ್ನಿಗೆ ಹೆರಿಗೆಯ ದಿನ ತುಂಬಿತ್ತು. ಆದ್ದರಿಂದ ಅವರ ಮನೆಯ ಆಳನ್ನು ಕಂಡೊಡನೆಯೇ ಚಂದ್ರಶೇಖರನ ಎದೆಯಲ್ಲಿ ಒಂದೇ ಸಲಕ್ಕೆ ದುಗುಡ, ಆಸೆ, ಭಯ—ಎಲ್ಲ ಒಟ್ಟುಗೂಡಿದವು.

ಚೆನ್ನಿಗೆ ಹೆರಿಗೆಯ ನೋವು ಪ್ರಾರಂಭವಾಗಿದೆಯೆಂದು ಸುದ್ದಿ ಬಂದಿತ್ತು. ಕೂಡಲೇ ಚಂದ್ರಶೇಖರನೂ ಅವನ ತಾಯಿಯೂ ಗೌಡರೂ ಆ ಮನೆಯತ್ತ ನಡೆದರು.

ಊರಿನ ಅಗಸಿತಿಯೇ ಸೂಲಗಿತ್ತಿ. ಅವಳಿಗೆ ನೈರ್ಮಲ್ಯದೃಷ್ಟಿಯೇ ಇರಲಿಲ್ಲ. ಇದನ್ನು ಕಂಡು ಚಂದ್ರಶೇಖರನ ಮನಸ್ಸು ಇನ್ನೂ ಅಧೀರ ವಾಯಿತು. ತಿಮ್ಮನ ಹೆಂಡತಿ ಹೆರುತ್ತಲೇ ಸತ್ತ ಕಥೆಯೂ ಕೂಡ ಆಗಲೇ ನೆನಪಿಗೆ ಬಂತು. ಚಂದ್ರಶೇಖರನಿಗೆ ಸದ್ಯ ಚೆನ್ನಿ ಈ ಗಂಡಾಂತರದಿಂದ ಪಾರಾಗಿ ಬಂದರೆ ಸಾಕಲ್ಲ, ಎನಿಸಿತು.

ಕೊನೆಗೆ ಸುಖ ಪ್ರಸವವಾಯಿತು. ಗಂಡು ಮಗು. ಚಂದ್ರಶೇಖರ ಸಮಾಧಾನದ ನಿಟ್ಟುಸಿರು ಬಿಟ್ಟ. ಹಣೆಯಲ್ಲಿ ಬಿಗಿದಿದ್ದ ನರ ಸಡಿಲ ವಾಯಿತು.

ಆದರೆ ಪ್ರಸವ ಕಾಲದಲ್ಲಿ ಹೆಂಗಸು ಪಡುವ ಕಷ್ಟವೇನೆಂಬುದರ ಕಿಂಚಿತ್ತಾದರೂ ಅರಿವು ಅಂದು ಅವನಿಗಾಯಿತು. 'ನೋವಿಲ್ಲದೆ ಯಾವು ದೊಂದೂ ಈ ಲೋಕದಲ್ಲಿ ಜನಿಸಲಾರದು ಮನುಷ್ಯರು ಹೆರವರ ನೋವಿನಲ್ಲಿ ಜನಿಸುತ್ತಾರೆ. ತಮ್ಮ ನೋವಿನಲ್ಲೇ ಸಾಯುತ್ತಾರೆ' ಎಂಬು ದಾಗಿ ಆಂಗ್ಲ ಕವಿಯೊಬ್ಬ ಹೇಳಿದ್ದ ಮಾತು ನೆನಪಿಗೆ ಬಂತು.

ಲಕ್ಕವ್ವನ ಸಂತೋಷ ಸೀಮಾತೀತ. ಮಗನಿಗಂತೂ ಮಗು ಹುಟ್ಟುವ ಯೋಗವಿನ್ನೂ ಬಂದಿರಲಿಲ್ಲ ಮಗಳಿಗಾದರೂ ಗಂಡು ಮಗು ಹುಟ್ಟಿತಲ್ಲ ಎಂದುಕೊಂಡಳು. ಚಂದ್ರಶೇಖರನ ತಾಯಿಯೂ ತಂದೆಯೂ ತಾವು ಬದುಕಿದ್ದಾಗಲೇ ಮೊಮ್ಮಗ ಹುಟ್ಟಿದ್ದಕ್ಕಾಗಿ ಹಿಗ್ಗಿದರು.

ಚಂದ್ರಶೇಖರ ಹೊಲೆಯೆಂಬುದನ್ನೂ ಅಲಕ್ಷಿಸಿ ಎಲ್ಲರ ಕಣ್ಣು ತಪ್ಪಿಸಿ ಮರುದಿನ ಮಗು-ಬಾಣಂತಿಯರಿದ್ದ ಕೊಟಡಿಗೆ ನುಗ್ಗಿದ.

ಮಂಕಾದ ಬೆಳಕಿನಲ್ಲಿ ಚೆನ್ನಿ ಮಲಗಿದ್ದಳು. 'ಚೆನ್ನಾ' ಎಂದ. ಮುಂದೆ ಮಾತು ಹೊರಡಲಿಲ್ಲ.

ಅವಳು ನಿಶ್ಯಕ್ತಿಧ್ವನಿಯಲ್ಲಿ 'ಆ' ಎಂದಳು. ಮಾತು ಗಂಟಲಲ್ಲೆ ಸಿಕ್ಕಿಕೊಂಡಿತು. ಆದರೆ ಮಾತಿನಲ್ಲಿ ಆಡಿ ತೋರಲಾಗದ್ದನ್ನು ಕಣ್ಣುಗಳು ಹೇಳುತ್ತಿದ್ದವು.

ಮಗು ನಿದ್ದೆ ಮಾಡುತ್ತಿತ್ತು.

ಚೆನ್ನಿ ಮಲಗಿದ್ದದ್ದು ಒಂದು ಕತ್ತಲೆಯ ಕೋಣೆಯಲ್ಲಿ. ಧಾರಾಳವಾಗಿ ಗಾಳಿ ಬೆಳಕು ಬಂದರೆ ಭೂತದ ಪೀಡೆಯಾದೀತೆಂದು ಇಂಥ ಕೋಣೆ ಕೋಣೆ ಆರಿಸಿದ್ದರು.

ಬಾಗಿಲ ಬಳಿಯ ಮೂಲೆಯಲ್ಲಿ ಒಂದು ಹಳೆ ಪೊರಕೆ. ಒಂದು ಜತೆ ಸವೆದ ಚಪ್ಪಲಿ. ಇದನ್ನು ಕಂಡು ಚಂದ್ರಶೇಖರನ ಮನಸ್ಸಿನಲ್ಲಿ ಒಮ್ಮೆಲೆ ನಗು, ಕನಿಕರ—ಎರಡೂ ಹುಟ್ಟಿದವು. ಆಮೇಲೆ ಚೆನ್ನಿಯನ್ನು ಶುಭ್ರವಾದ ಗಾಳಿ ಬೆಳಕು ಬರುವ ಕೊಟಡಿಯಲ್ಲಿ ಮಲಗಿಸಬೇಕೆಂದು ತಾಯಿಯೊಡನೆ ಹೇಳಿದ

ಆದರೆ ತಾಯಿ ಒಪ್ಪಲಿಲ್ಲ ಲಕ್ಕವ್ವನೂ, 'ಎಲ್ಲಾರಾ ಉಂಟಾ?' ಎಂದಳು.

ಇದೆಲ್ಲಾ ಆರೋಗ್ಯಕರವಲ್ಲವೆಂದು ಚಂದ್ರಶೇಖರ ತಾಯಿಗೆ ಹೇಳಿದ್ದಕ್ಕೆ,

'ಹಂಗಾದ್ರೆ ನಾವು ನಿಮ್ಮನ್ನೆಲ್ಲಾ ಬೆಳೀಸ್ಲೇ ಇಲ್ವಾ?' ಎಂದು ತಾಯಿ ಹೇಳಿದಳು.

ಇನ್ನು ಅವಳನ್ನು ಒಪ್ಪಿಸುವುದು ಕಷ್ಟವಾಯಿತು ತಾವಂತೂ ಅದೃಷ್ಟ ಗಟ್ಟಿಯಾಗಿದ್ದದ್ದರಿಂದ ಬದುಕಿಕೊಂಡರು. ಆದರೆ ಸತ್ತ ಎಷ್ಟೋ ಮಕ್ಕಳಲ್ಲಿ, ತಾಯಂದಿರ ಇಂಥ ಅಜ್ಞಾನದಿಂದ ಸತ್ತವರೂ ಇಲ್ಲವೆ' ಎಂದುಕೊಂಡ. ತಿಮ್ಮನ ಹೆಂಡತಿಯ ನೆನಪು ಅವನಿಗೆ ಪದೇಪದೇ ಬರುತ್ತಲೇ ಇತ್ತು.

ಈ ಅಜ್ಞಾನಕ್ಕೆಲ್ಲಾ ಒಂದೇ ಮದ್ದು. ಒಂದು ಒಳ್ಳೆಯ ಸೂತಿಕಾ ಗೃಹ. ಈಗ ಅದಕ್ಕಾಗಿ ಏಳೆಂಟು ಮೈಲಿ ದೂರದಲ್ಲಿದ್ದ ಸೀಲಾವರಕ್ಕೆ ಹೋಗಬೇಕಾಗಿತ್ತು. ಆದರೆ ಹೆರಿಗೆಯ ಬೇನೆ ತೋರಿದವರನ್ನು ಅಷ್ಟು ದೂರ ಕರೆದುಕೊಂಡು ಹೋಗಲಾಗುತ್ತಿತ್ತೆ?

ಆ ಊರಿನಲ್ಲೇ ಒಂದು ಸೂತಿಕಾಗೃಹವಿದ್ದಿದ್ದರೆ ಸುತ್ತಣ ಹಳ್ಳಿಗೆಲ್ಲ ಅನುಕೂಲವಾಗುತ್ತಿತ್ತು. ಆದರೆ....

ಯಥಾಪ್ರಕಾರ ಹಣದ ಅಡಚಣೆಯಾಗಿತ್ತು. ತಾನೇನಾದರೂ ದೇಶದ ನಾಯಕನಾಗಿದ್ದಿದ್ದರೆ ಜನಸೌಖ್ಯಕ್ಕೆಲ್ಲ ಪ್ರತಿಕೂಲವಾಗಿ ಬರುತ್ತಿದ್ದ ಈ ಹಣವ್ಯವಸ್ಥೆಯನ್ನೆ ಕಿತ್ತೊಗೆಯುತ್ತಿದ್ದ.

ಮೂರು ತಿಂಗಳಾದ ಮೇಲೆ ಹೆಂಡತಿಯೂ ಮಗನೂ ತಮ್ಮ ಮನೆಗೆ ಬಂದಾಗ ಚಂದ್ರಶೇಖರನ ಮನಸ್ಸು ಸ್ವಲ್ಪ ಪ್ರಸನ್ನವಾಗಿತ್ತು.

## ೧೨

ಚಂದ್ರಶೇಖರನ ಈ ಪ್ರಸನ್ನತೆ ಬಹು ಕಾಲ ಉಳಿಯಲಿಲ್ಲ. ಊರ ಸೌಖ್ಯವೇ ತನ್ನ ಸೌಖ್ಯವೆಂದು ಬಗೆದವನಿಗೆ ಸರ್ವದಾ ಪ್ರಸನ್ನತೆಯೆಲ್ಲಿ? ಊರ ಜಂಜಾಟ ಅವನ ಬಾಳ ಅಶಾಂತಿಗೆ ಸದಾ ಕಾರಣ

ಇಂಥ ಕಾರಣವೊಂದು ಕೆಲವು ತಿಂಗಳುಗಳಲ್ಲೇ ಸಂಭವಿಸಿತು. ಹಿಂದಣ ಸುಗ್ಗಿಯಲ್ಲಿ ಬೆಳೆ ಸರಿಯಾಗಿ ಬಂದಿರಲಿಲ್ಲ ಆ ಕಾಲದಲ್ಲಿ ಎರಡು ದಿನವನ್ನು ಜನ ಸಂತೋಷವಾಗಿ ಕಳೆದರೂ ಕ್ರಮೇಣ ಅಭಾವದ ನಗ್ನ ಸತ್ಯ ಅವರ ಮುಂದೆ ಬಂದು ನಿಂತಿತು ಆ ವರ್ಷ ಸೀಮೆಯಲ್ಲೆಲ್ಲಾ ಬರವಂತೆ ಒಂದು ವರ್ಷ ಸ್ವಲ್ಪ ಹೆಚ್ಚು ಕಡಮೆಯಾದರೇ ಆ ಕಡೆ ಈ ಕಡೆ ವಾಲಬೇಕಾದ ಪರಿಸ್ಥಿತಿಯಿರುವ ಮಾಯುಂದಹಳ್ಳಿಯ ಪಾಡು ಆ ವರ್ಷ ಕೇಳಬೇಕೆ? ಒಂದು ಪಕ್ಷ ಊರ ಕೆರೆ ಅಚ್ಚುಕಟ್ಟಾಗಿದ್ದು ನೀರು ಸಮೃದ್ಧಿಯಾಗಿದ್ದಿದ್ದರೆ ಈ ಬವಣೆ ಅಷ್ಟು ಕಾಣುತ್ತಿರಲಿಲ್ಲವೇನೋ. ಆದರೆ ಇಲ್ಲದ್ದರ ಮಾತು ಈಗೇಕೆ?

ದಿನ ಬೆಳಗಾದರೆ ಜನರ ಗುಳಿಬಿದ್ದ ಕಣ್ಣು, ಬೆನ್ನು ತಾಕಿದ್ದ ಹೊಟ್ಟೆ, ಹಂದರದ ಎದೆ, ಇವನ್ನು ನೋಡಲಾಗಲಿಲ್ಲ, ಚಂದ್ರಶೇಖರನಿಗೆ. ಮಾತನ್ನೂ ಮೀರಿತ್ತು, ಅವರ ಗೋಳು. ಕೊಡಲು ಅವನ ಬಳಿಯೂ ಧಾನ್ಯವಿರಲಿಲ್ಲ ಅವರವರಿಗೆ ಅಗತ್ಯವಾದಷ್ಟು ಧಾನ್ಯ ಬಿಟ್ಟು ಉಳಿದ ದ್ದನ್ನು ಸರ್ಕಾರವಾಗಲೇ ತೆಗೆದುಕೊಂಡು ಹೋಗಿತ್ತು. ಬೇರೆ ಕಡೆಯಿಂದ ತಂದುಕೊಡಲು ಎಲ್ಲೆಲ್ಲೂ ಇದೇ ಹಾಹಾಕಾರ. ಇಂಥ ಸಮಯದಲ್ಲಿ ಯಾರು ತಾನೆ ಏನು ಮಾಡಿಯಾರು?

ಊರಿನಲ್ಲಿ ಸ್ವಲ್ಪ ಸ್ಥಿತಿವಂತರಾಗಿದ್ದವರೆಂದರೆ ಚಿನ್ನಯ್ಯ, ಕೊನೆಯಂಗಡಿ ಉಪಾಧ್ರು. ಚಿನ್ನಯ್ಯನನ್ನು ಕೇಳಿದ್ದಕ್ಕೆ,

'ಇಟ್ಕೊಂಡು ಇಲ್ಲಾ ಅಂದೇನಾ? ಧಾನ್ಯಾನೆಲ್ಲಾ ಸರ್ಕಾರದೋರು ತಕೊಂಡಿರೋವಾಗ ಇನ್ನೇನು ಬಂತು? ಬೇಕಾದರೆ ನೋಡಿಕೋ' ಎಂದ

—ಅವನ ಮಾತು ನಂಬಬೇಕಾಗಿತ್ತು.

ಉಳಿದವರು ಅಂಗಡಿ 'ಉಪಾಧ್ರು.' ಅವರ ಬಳಿಗೂ ಚಂದ್ರಶೇಖರ ಹೋಗಿ ಕೇಳಿದ. ಅವರು ಬಾಯಲ್ಲಿದ್ದ ತಂಬುಲದ ರಸವನ್ನು ಚಿತಕ್ಕನೆ ಹೊರಗೆ ಉಗಿದು ಬಂದು,

'ಉಂಟಾ ಸ್ವಾಮಿ? ಅಂತ ಮಾತೆಲ್ಲಾದ್ರೂ ಆಡಬಹುದಾ?' ಎಂದು ಹುಸಿನಗೆ ನಗುತ್ತಾ ಆ ವಿಚಾರವನ್ನು ತೇಲಿಸಿಬಿಟ್ಟರು.

—ಅವರ ಬಳಿ ಇಲ್ಲವೆಂದು ಹೇಳಲು ಸಾಧ್ಯವಿರಲಿಲ್ಲ.

ಅಂತೂ ಜನದ ಗೋಳು ಮಾತಿನ ಮೇರೆ ಮೀರಿತ್ತು ಚಂದ್ರಶೇಖರನಾಗಲಿ, ಯಾರೇ ಆಗಲಿ, ಏನೂ ಮಾಡುವ ಹಾಗಿರಲಿಲ್ಲ. ಸರ್ಕಾರಕ್ಕೆ ಕೂಡ ಈ ಸಮಸ್ಯೆ ಹಿರಿದಾಗಿಯೇ ಇತ್ತು. ಚಂದ್ರಶೇಖರ ಒಂದು ಹಳ್ಳಿಯಲ್ಲಿ ಎದುರಿಸಬೇಕಾದ್ದನ್ನೇ ಸರ್ಕಾರ ದೇಶದಲ್ಲೆಲ್ಲ ಎದುರಿಸಬೇಕಾಗಿತ್ತು.

ಆ ವರ್ಷದ ನಡುಗಾಲ, ಅಂತ್ಯಕಾಲ, ಹೇಗೆ ಕಳೆಯಿತೋ? ಒಂದು ಮಹಾ ದುಃಸ್ವಪ್ನ ಬಂದು ಹೋದ ಹಾಗೆಯೇ ಭಾಸವಾಯಿತು, ಚಂದ್ರಶೇಖರನಿಗೆ

ಇದರ ಜತೆಯಲ್ಲೇ ಮನೆಯಲ್ಲಿನ ಕಷ್ಟವೂ ಪ್ರಾರಂಭವಾಯಿತು. ಚಂದ್ರಶೇಖರನ ತಂದೆ ದಿನೇ ದಿನೇ ಕ್ಷೀಣಿಸುತ್ತಾ ಇದ್ದರು ಅವರ ವಯಸ್ಸು ಅರುವತ್ತನ್ನು ದಾಟಿತ್ತು. ಅವರ ಕಣ್ಣು ಒಳಗೊಳಗೇ ಹರಿಯತೊಡಗಿತು. ಒಮ್ಮೊಮ್ಮೆ ಏನನ್ನೊ ನೆನೆಯುತ್ತಾ ಗಂಟೆ ಗಂಟೆ ಕೂತು ಬಿಡುತ್ತಿದ್ದರು ಕೊನೆಗೆ ಹೆಂಡತಿಯನ್ನೋ ಮಗನನ್ನೋ ಕರೆಯುತ್ತಿದ್ದರು.

ಅವರು ಬಂದು ಕೇಳಿದರೆ ಯಾತಕ್ಕೆ ಕರೆದದ್ದೋ ಗೊತ್ತಿರಲಿಲ್ಲ. 'ಸುಮ್ಮನೆ ಕರೆದೆ. ಏನೂ ಇಲ್ಲ. ಹೋಗಿ' ಎನ್ನುತ್ತಿದ್ದರು. ತಂದೆಯ ಈ ಸ್ಥಿತಿಯನ್ನು ಕಂಡು ಚಂದ್ರಶೇಖರನಿಗೆ ಅಂಜಿಕೆಯಾಯಿತು.

ಒಂದು ದಿನ ಚಂದ್ರಶೇಖರ ಶಿಕ್ಷಣಶಾಲೆಗೆ ಹೋಗಿದ್ದ. ನರಸಿಂಹಯ್ಯ, ಭಾರತದಲ್ಲಿ ಕುಂತಿ-ಕರ್ಣರ ಸಂವಾದ ಓದಿ ಮುಗಿಸಿದ್ದರು. ಎದ್ದು ಹೋಗುತ್ತಿದ್ದ ಜನ ಈ ವಿಚಾರವಾಗಿ ಚರ್ಚಿಸುತ್ತಾ ಇದ್ದರು. ಆ ಸಮಯದಲ್ಲಿ ಚಂದ್ರಶೇಖರನೂ ಅದೇ ವಿಚಾರ ಯೋಚಿಸುತ್ತಾ ಕುಳಿತಿದ್ದ. ಅಲ್ಲಿದ್ದ ಪ್ರತಿಯೊಬ್ಬರಿಗೂ ಆ ವಿಚಾರ ಮಾತಾಡಬೇಕೆಂದು ಕುತೂಹಲ. ಚಂದ್ರಶೇಖರ ಏನು ಹೇಳುತ್ತಾನೋ ಕೇಳಬೇಕೆಂಬ ತವಕ. ಆದರೆ ಇನ್ನೂ ಯಾರೂ ಮಾತು ಪ್ರಾರಂಭಿಸಿರಲಿಲ್ಲ. ಅಷ್ಟರಲ್ಲಿ ನಿಂಗ ಬಂದು, 'ಚಂದ್ರಪ್ಪ!' ಎಂದು ಕೂಗಿದ.

ಚಂದ್ರಪ್ಪ ಅರೆಮುಚ್ಚಿದ್ದ ಕಣ್ಣು ಬಿಟ್ಟು ನೋಡಿದ. ನಿಂಗನ ಮೊಗದಲ್ಲಿ ಗಾಬರಿ ಮೂಡಿತ್ತು.

'ಅಯ್ಯಾವರು ಏನೋ ಒಂದು ಧರವಾಗವರೆ. ಒಸಿ ಬಂದು ಹೋಗಿ' ಎಂದ.

ಚಂದ್ರಶೇಖರ ಕೂಡಲೇ ಮನೆಗೆ ಹೋದ. ಗೌಡರು ಎದೆನೋವು ಎಂದು ಹಾಸಿಗೆ ಒರಗಿ ಮಲಗಿದ್ದರು. ಇನ್ನು ನಾ ತುಂಬಾ ಹೊತ್ತು ಬದುಕೋದಿಲ್ಲ, ಚಂದ್ರ. ಮನೆ ವಿಚಾರ ಎಲ್ಲಾ ನಿನಗೆ ಗೊತ್ತೇ ಇದೆ. ಊರು, ಮನೆ ಎರಡನ್ನೂ ಸಂಭಾಳಿಸಿಕೊಂಡು ಹೋಗೋ ಭಾರ ನಿಂದು' ಎಂದರು.

ಚಂದ್ರಶೇಖರನಿಗೆ ಏನೂ ತೋರಲಿಲ್ಲ. ಕೂಡಲೇ ಒಂದು ಸೈಕಲ್ಲು ಕೊಟ್ಟು ಆ ನಿಶಿಯಲ್ಲಿ ಡಾಕ್ಟರಿಗಾಗಿ ನೀಲಾವರಕ್ಕೆ ಆಳು ಅಟ್ಟಿದ. ಹಿಂದೆಯೇ ಗಾಡಿಯನ್ನೂ ಕಳಿಸಿದ.

ಡಾಕ್ಟರು, 'ಈ ಅರ್ಧ ರಾತ್ರೀಲಿ ಬರೋದು ಹೇಗೆ? ಬೆಳಗ್ಗೆ ಬರುತ್ತೇನೆ, ಬೇಕಾದರೆ' ಎಂದರು.

ಆ ರಾತ್ರಿಯಲ್ಲಿ ಅಷ್ಟು ದೂರ ಹೋಗುವುದೂ ಒಂದು ಸಮಸ್ಯೆಯಾಗಿಯೇ ಇತ್ತು. ಆದರೆ ಅರ್ಧ ಗಂಟೆಯಲ್ಲಿ ಗಾಡಿಯೂ ಬಂದು ಸೇರಿತು. ಅವರಿಗೆ ಎಷ್ಟೋ ಕೇಳಿಕೊಂಡ ಮೇಲೆ ಡಾಕ್ಟರು 'ಆಗಲಿ' ಎಂದರು. ರೋಗಿಯ ಸ್ಥಿತಿಯ ವರ್ಣನೆ ಕೇಳಿ, ಕೂಡಲೇ ಚಿಕಿತ್ಸೆ ಅಗತ್ಯವೆಂಬುದು ಅವರಿಗೂ ಅರಿವಾಗಿತ್ತು.

ಡಾಕ್ಟರು ರಾತ್ರಿ ಎರಡು ಗಂಟೆಯ ಹೊತ್ತಿಗೆ ಹಳ್ಳಿ ತಲುಪಿದರು. ಆದರೆ ಅವರು ಬರುವ ವೇಳೆಗೆ ಪರಿಸ್ಥಿತಿ ಕೈಮೀರಿಹೋಗಿತ್ತು. ಗೌಡರು ನಿಶ್ಶಕ್ತರಾಗುತ್ತಾ ಇದ್ದರು. ಸುಳಿಗಾಳಿಗೆ ಸಿಕ್ಕ ಬೆಂಕಿಯ ಕೆಂಡ ಬೂದಿಯ ಹೊದಿಕೆ ಕಳಚಿ ಸತ್ವಹೀನವಾಗುತ್ತಿದ್ದಂತೆ ಗೌಡರ ಜೀವಕಳೆ ಇಳಿಯುತ್ತಾ ಇತ್ತು. ಡಾಕ್ಟರು ಬಂದಾಗ ಒಮ್ಮೆ ಆ ಕಡೆ ನೋಡಿದರು ಮಾತ್ರ. ಡಾಕ್ಟರು ಬಂದಾಗ ಒಮ್ಮೆ ಗಂಭೀರವಾಗಿ ತಲೆಯಲ್ಲಾಡಿಸಿದರು. ಕರೆದವರ ಮನಸ್ಸಮಾಧಾನಕ್ಕಾಗಿ, ಡಾಕ್ಟರು ಸೂಜಿಯ ಮೂಲಕ ಒಮ್ಮೆ ಮದ್ದು ತುಂಬಿದರು. ನಾಲ್ಕೈದು ಗಂಟೆ ಮುಂಚೆ ಬಂದಿದ್ದರೆ ಏನಾದರೂ ಮಾಡಬಹುದಾಗಿತ್ತು, ಎಂದರು.

ಸ್ವಲ್ಪ ಹೊತ್ತಿನಲ್ಲೆ ಗೌಡರ ಜೀವ ಬಿಡುಗಡೆ ಹೊಂದಿತು, ಕೊರೆಯುವ ಚಳಿಗಾಳಿ ಹೊರಗಣ ಕತ್ತಲಿಂದ ಕಿಟಕಿಯ ಮೂಲಕ ಕೊಟಡಿಗೆ ಹರಿಯಿತು.

ಚಂದ್ರಶೇಖರನಿಗೆ ಆಕಾಶ ಕಳಚಿ ಬಿದ್ದ ಹಾಗಾಯಿತು. ಇದುವರೆಗೂ ತಂದೆಯಿದ್ದುದರಿಂದ ತಾನೇನು ಮಾಡಲೂ ಧೈರ್ಯವಿತ್ತು. ಈಗ ಪ್ರಪಂಚವಲ್ಲಿ ತಾನು ಮಾಡುವ ಕೆಲಸಕ್ಕೆಲ್ಲ ತಾನೇ ಜವಾಬುದಾರ. ಇದನ್ನು ನೆನೆದು ಅವನ ಎದೆ ನಡುಗಿತು. ತಮ್ಮ ತಂದೆ ತನ್ನ ಮನೋಭಾವಕ್ಕನುಸಾರವಾಗಿ ನಡೆಯುತ್ತಿದ್ದರು. ಆ ದೊಡ್ಡ ಗುಣ ಹಳ್ಳಿಯಲ್ಲಿ ಬೇರೆ ಯಾರಿಗೂ ಇರಲಿಲ್ಲ. ಒಂದು ಪಕ್ಷ ಅವರು ವಿರೋಧಿಸಿದ್ದರೆ ಅವರನ್ನೆದುರಿಸಿ ಸ್ವತಂತ್ರವಾಗಿ ಕೆಲಸ ಮಾಡಲಾಗುತ್ತಿತ್ತೋ ಇಲ್ಲವೊ, ಚಂದ್ರಶೇಖರನಿಗೆ: ಇಷ್ಟು ದಿನ ಹೋದ ಮೇಲೆ ಆ ವಿಚಾರ ಹೇಳುವುದು ಕಷ್ಟವಾಗಿತ್ತು. ಅಂತೂ ಚಂದ್ರಶೇಖರನ ತಂದೆ ಅವನಿಗೆ ಅನುಕೂಲವಾಗಿದ್ದುದರಿಂದ ಅವನ ಕಾರ್ಯವೆಷ್ಟೋ ಹಗುರವಾಗಿತ್ತು.

ಆದರೆ ಅಂಥ ತಂದೆ ಇನ್ನಿಲ್ಲ. ಇದು ಕಟು ಸತ್ಯ....

ಊರಿನ ಜನರಂತೂ, ತಮ್ಮ ತಂದೆಯನ್ನೇ ಕಳೆದುಕೊಂಡ ಹಾಗೆ ಗೋಳಾಡಿದರು....

'ನೋವಿಲ್ಲದೆ ಯಾವುದೊಂದೂ ಈ ಲೋಕದಲ್ಲಿ ಜನಿಸಲಾರದು. ಮನುಷ್ಯರು ಹೆರವರ ನೋವಿನಲ್ಲಿ ಜನಿಸುತ್ತಾರೆ. ತಮ್ಮ ನೋವಿನಲ್ಲೇ ಸಾಯುತ್ತಾರೆ' ಎಂಬ ವಾಕ್ಯ ಅವನಿಗೆ ಮತ್ತೆ ನೆನಪಿಗೆ ಬಂತು ಈ ವಾಕ್ಯದ ಪೂರ್ವಾರ್ಧದ ಸತ್ಯ ಚೆನ್ನಿ ಹೆತ್ತಾಗ ಅರ್ಥವಾಗಿತ್ತು. ತಂದೆಯ ಸಾವಿನ ನೋವನ್ನು ಕಣ್ಣಾರ ಕಂಡಾಗ ಉತ್ತರಾರ್ಧವೂ ನಿಜ ಎಂದು ಕೊಂಡ....

'ನಾಲ್ಕೈದು ಗಂಟೆ ಮುಂಚೆ ಬಂದಿದ್ದರೆ ಏನಾದರೂ ಮಾಡಬಹು ದಾಗಿತ್ತು' ಎಂದು ಡಾಕ್ಟರು ಹೇಳಿದ ಮಾತು ಬೇರೆ ಅವನಿಗೆ ಪದೇಪದೇ ನೆನಪಿಗೆ ಬರುತ್ತಿತ್ತು. ಹಳ್ಳಿಯಲ್ಲೇ ವೈದ್ಯಸಹಾಯವಿದ್ದಿದ್ದರೆ..

ಇದ್ದಿದ್ದರೆ ತನ್ನ ತಂದೆಯೊಬ್ಬರೇ ಅಲ್ಲ ಇನ್ನೂ ಎಷ್ಟು ಜನ ಬದುಕಿಕೊಳ್ಳುತ್ತಿದ್ದರೋ....

ಮತ್ತೆ ಬಂತು, ಆರ್ಥಿಕ ಪ್ರಶ್ನೆ.

೧೩

ಚಂದ್ರಶೇಖರನ ತಂದೆಯ ಸಾವಿನ ಗಾಯ ಬಲು ನಿದಾನವಾಗಿ ಆರುತ್ತಿತ್ತು. ಅವನು ಯಥಾಪ್ರಕಾರ ತನ್ನ ಕರ್ಮಪಥದಲ್ಲಿ ಕಾಲಿಟ್ಟಿದ್ದ.

ಅವರ ಸಾವು ಊರಿಗೂ ಒಂದು ಭರಿಸಲಾಗದ ನಷ್ಟ. ಆ ನಷ್ಟದ ಅಗಾಧ ಪ್ರಮಾಣದ ಅರಿವು ಕ್ರಮೇಣ ಊರಿನ ಜನರಿಗೆ ಅರಿವಾಗು ತ್ತಿತ್ತು.

ಮಾಯಂದ ಹಳ್ಳಿಯೀಗ ಜ್ಯೋತಿಯಿಲ್ಲದ ಹಣತೆಯ ಹಾಗಾ ಗಿತ್ತು. ಎಣ್ಣೆಯಿತ್ತು, ಬತ್ತಿಯಿತ್ತು. ಆದರೆ ಎಲ್ಲ ನಿಷ್ಫಲವಾಗಿದ್ದ ಹಾಗೆ ಕಾಣುತ್ತಿತ್ತು

ಪ್ರತಿಯೊಂದು ಪ್ರಸಂಗದಲ್ಲೂ ಊರ ಜನ ಸುಬ್ಬಯ್ಯಗೌಡರನ್ನು ನೆನೆದುಕೊಳ್ಳುತ್ತಿದ್ದರು. ಆದರೆ ಊರ ಜೀವನ ನಿಲ್ಲಲು ಸಾಧ್ಯವೆ? ಅಂತೂ ಜನರು ಎಂದಿನಂತೆಯೇ ಸಾಗಿದ್ದರು.

ಸುಬ್ಬಯ್ಯಗೌಡರ ನಿಧನದಿಂದ ಆ ಊರಿನ ಪಂಚಾಯತಿಯ ಸ್ಥಾನವೂ, ದೇಶದ ಪ್ರಜಾಪ್ರತಿನಿಧಿ ಸಭೆಗೆ ಆ ತಾಲ್ಲೂಕಿನ ಪ್ರತಿನಿಧಿಯ ಸ್ಥಾನವೂ ತೆರವಾದವು.

ಸುಬ್ಬಯ್ಯಗೌಡರು ಬದುಕಿರುವ ವರೆಗೂ ಆ ಎರಡು ಸ್ಥಾನಗಳೂ ಅವರಿಗೇ ಮೀಸಲು. ಆ ಸುತ್ತಿನ ಎಲ್ಲ ಹಳ್ಳಿಗಳ ಜನರೂ ಪ್ರತಿನಿಧಿ ಸಭೆಗೆ ಅವರನ್ನೇ ಆರಿಸಿ ಕಳುಹಿಸುತ್ತಿದ್ದರು. ಅವರಂಥವರು ಆ ಸುತ್ತಿನಲ್ಲೇ ಇನ್ನೊಬ್ಬರು ಇರಲಿಲ್ಲ.

ಸುಬ್ಬಯ್ಯಗೌಡರು ಬದುಕಿದ್ದಾಗ ಚಿನ್ನಯ್ಯ ಈ ಎರಡು ಸ್ಥಾನಗಳ ಮೇಲೂ ಕಣ್ಣು ಹಾಕಿದ್ದ. ಅವನ ದೃಷ್ಟಿಯಲ್ಲಿ ಸಿರಿವಂತಿಕೆಯೇ ದೊಡ್ಡಸ್ತಿಕೆಗೆ ಇರಬೇಕಾಗಿದ್ದ ಅಧಿಕಾರ.

ಆದರೆ ಸುಬ್ಬಯ್ಯಗೌಡರೊಡನೆ ಸೆಣಸಿ ಆ ಸ್ಥಾನ ಗಳಿಸುವುದು ಸಾಧ್ಯವಿಲ್ಲವೆಂದುಕೊಂಡು ಆ ಯೋಚನೆಯನ್ನು ತಲೆಗೆ ಹಚ್ಚಿಕೊಂಡಿರಲಿಲ್ಲ.

ಗೌಡರು ಸತ್ತ ಕೂಡಲೇ ಅವನಿಗೆ ಹೊಳೆದದ್ದೆಂದರೆ ಇದೇ: ಇನ್ನು ನಿರಾತಂಕವಾಗಿ ಆ ಸ್ಥಾನಗಳಿಗೆ ಪ್ರತಿಸ್ಪರ್ಧಿಸಿ ಅವನ್ನು ಪಡೆಯಬಹುದಾಗಿತ್ತು. ಕೀರ್ತಿಶಿಖರಕ್ಕೆ ಇನ್ನೊಂದೇ ಮೆಟ್ಟಿಲು, ಎಂದುಕೊಂಡ.

ಗೌಡರ ಸಾವಿಗಾಗಿ ಊರ ಜನ ಅತಿಯಾಗಿ ಶೋಕಿಸುತ್ತಿದ್ದದ್ದು ಅವನಿಗೆ ಅಷ್ಟೊಂದು ಸರಿಕಾಣಲಿಲ್ಲ. ಅವರು ತನ್ನ ಸೋದರಮಾವನಲ್ಲವೆ? ತನಗೆ ದುಃಖವಿಲ್ಲವೆ? ಆದರೆ ತಾನು ಅವರ ಹಾಗೆ ಅಳುತ್ತಿದ್ದನೆ? ವಯಸ್ಸಾದ ಮೇಲೆ ಎಲ್ಲರೂ ಹೋಗತಕ್ಕವರೇ. ಇನ್ನೂ ಸ್ವಲ್ಪ ಕಾಲ ಇದ್ದಿದ್ದರೆ ಚೆನ್ನಾಗಿತ್ತು. ಆದರೆ ಅದು ನಮ್ಮ ಯತ್ನದಲ್ಲಿದೆಯೆ? ಆದದ್ದಾಯಿತು. ಇನ್ನು ಮೇಲೆ ನಾವು ಮಾಡಬೇಕಾದ ಕೆಲಸ ಮಾಡೋಣ, ಎಂದು ಹೇಳುತ್ತಿದ್ದ. ವೇದಾಂತ ಅವನ ಕೈಗೆ ಅನುಕೂಲವಾಗಿ ಲಭಿಸಿತ್ತು.

ಈ ಮಾತಿನ ಜತೆಗೆ ಮುಂದಿನ ಚುನಾವಣೆಯ ವಿಚಾರವನ್ನೂ ಸೇರಿಸಲು ಮರೆಯುತ್ತಿರಲಿಲ್ಲ. ಇನ್ನು ಪ್ರತಿನಿಧಿ ಸಭೇಗೆ ಯಾರು ಹೋಗ್ತಾರೋ ನೋಡಬೇಕು ನಮ್ಮೂರಿಗೇ ಆ ಗೌರವ ಉಳಿಸಿಕೋಬೇಕು—ಎಂದು ಮಾತು ಕೂಡಿಸುತ್ತಿದ್ದ.

ಒಂದು ದಿನ ಸಂಜೆ ಊರಿನ ಪಂಚಾಯತಿ ಸದಸ್ಯರು ಕೂತು ಮುಂದೆ ಯಾರು ತಮ್ಮ ಅಧ್ಯಕ್ಷರಾಗಬೇಕೆಂದು ವಿಚಾರ ಮಾಡಿದರು. ಚಂದ್ರಶೇಖರ-ಚಿನ್ನಯ್ಯ, ಇವರೂ ಅಂದಿನ ಸಭೆಗೆ ಬಂದಿದ್ದರು. ಚಂದ್ರಶೇಖರನೇ ಅಧ್ಯಕ್ಷನಾಗಬೇಕೆಂದು ಶಾನುಭೋಗರು ಸೂಚಿಸಿದರು.

ಆದರೆ ಚಂದ್ರಶೇಖರ ತನಗೆ ಆ ಸ್ಥಾನ ಬೇಡವೆಂದು ಹೇಳಿದ. ನಾನೊಬ್ಬ ಕೆಲಸಗಾರ. ನನಗೇಕೆ ಅಂಥ ಗೌರವದ ಸ್ಥಾನ? ಎಂದು ಹೇಳಿದ. ಬೇರೆ ಯಾರಾದರೂ ಹಿರಿಯರುಆ ಸ್ಥಾನದಲ್ಲಿ ಕುಳಿತು ನಮಗೆ ದಾರಿ ತೋರಿಸಬೇಕು ಎಂದ.

ಆದರೆ ಪಂಚಾಯತಿ ಸದಸ್ಯರಿಗೆ ಅವನನ್ನು ಬಿಟ್ಟು ಬೇರೆ ಯಾರಿಗೂ ಆ ಸ್ಥಾನ ಕೊಡಲು ಇಷ್ಟವಿರಲಿಲ್ಲ. ಅವರು ಎಷ್ಟೋ ವಿಧವಾಗಿ ಅವನನ್ನು ಕೇಳಿಕೊಂಡರು. ಆದರೆ ಅವನು ಒಡಂಬಡಲಿಲ್ಲ. ಅವನದು 'ಉಹುಂ!' ಎಂದು ಒಂದೇ ಮಾತು.

ಆಗ ಶಾನುಭೋಗರ ಹೆಸರು ಸೂಚಿತವಾಯಿತು. ಚಂದ್ರಶೇಖರನೇ ಅದನ್ನು ಸೂಚಿಸಿದ.

ಶಾನುಭೋಗರು, 'ಛೆ! ಛೆ! ಎಲ್ಲಾದರೂ ಉಂಟೆ?' ಎಂದರು. ಅವರಿಗೂ ಆ ಸ್ಥಾನ ಇಷ್ಟವಿರಲಿಲ್ಲ.

ಆದರೆ ಉಳಿದವರೆಲ್ಲರೂ ಬಲವಂತ ಪಡಿಸಿದಾಗ ಅವರು ಒಪ್ಪಿಕೊಳ್ಳಲೇ ಬೇಕಾಯಿತು. ಚಂದ್ರಶೇಖರ ಬೇಡವೆಂದರೆ ಅದರಲ್ಲಿ ಅರ್ಥವಿದೆ. ಆದರೆ ನೀವೂ ಬೇಡವೆಂದರೆ ಬೇರೆ ಯಾರಿದಾರೆ? ಹೇಳಿ—ಎಂದು ಎಲ್ಲರೂ ಒತ್ತಾಯ ಪಡಿಸಿದಾಗ ಶಾನುಭೋಗರಿಗೆ ಬೇಡವೆನ್ನಲು ಆಗಲೇ ಇಲ್ಲ.

ಇಷ್ಟೆಲ್ಲ ಮಾತುಕತೆಯಾದಾಗ ಚಿನ್ನಯ್ಯ ಮೌನವಾಗಿಯೇ ಕುಳಿತಿದ್ದ. ತಾನು ಆ ಊರಿನ ಪಟೇಲ. ಯಾರಾದರೂ ತನ್ನ ಹೆಸರು ಸೂಚಿಸಿಯಾರೆಂದು ಅವನು ನಿರೀಕ್ಷಿಸಿದ್ದ.

ಚಂದ್ರಶೇಖರನ ಹೆಸರು ಸೂಚಿತವಾದಾಗ ಅವನ ನಿರೀಕ್ಷೆ ವಿಫಲ ವಾಯಿತು. ಅನಂತರ, ಚಂದ್ರಶೇಖರ ಬೇಡವೆಂದಾಗ, ಅವನ ಬದಲಾ ದರೂ ತನ್ನ ಹೆಸರನ್ನು ಸೂಚಿಸಬಹುದೆಂದುಕೊಂಡಿದ್ದ. ಆ ನಿರೀಕ್ಷೆಯೂ ವಿಫಲವಾಯಿತು

ಸ್ವತಃ ಚಂದ್ರಶೇಖರನೇ ಇನ್ನೊಬ್ಬರ ಹೆಸರು ಸೂಚಿಸಿದ್ದರಿಂದ ಅವನ ಮೈ ಉರಿದುಹೋಯಿತು. ತಮ್ಮ ಸಂಸಾರಕ್ಕೆ ಒಮ್ಮೆ ದೊರೆತಿದ್ದ ಗೌರವ ವನ್ನು ತಮ್ಮ ಸಂಸಾರದಲ್ಲೆ ಉಳಿಸಿಕೊಳ್ಳಬೇಕೆಂಬಷ್ಟು ಕೂಡ ತಿಳಿಯ ಬೇಡವೆ, ಈ ಹುಂಬನಿಗೆ? ಎಂದುಕೊಂಡ. ಹಿಂದೆ ತಾನೇ ಅವನ ವಿರುದ್ಧವಾಗಿ ಮಾಡಿದ ಪ್ರಚಾರವೆಲ್ಲ ಆಗ ಅವನಿಗೆ ನೆನಪಿಗೆ ಬರಲಿಲ್ಲ.

ಅಂತೂ ಶಾನುಭೋಗರು ಪಂಚಾಯತಿಯ ಮುಂದಿನ ಅಧ್ಯಕ್ಷ ರೆಂದಷ್ಟು ತೀರ್ಮಾನವಾದ ಹಾಗಾಯಿತು.

ಆದರೆ ಆಗ ಚಿನ್ನಯ್ಯ ಸ್ವರವೆತ್ತಿದ. 'ನೀವು ಮಾಡುತಾ ಇರೋ ದೆಲ್ಲ ಯಾಕೋ ಸರಿಯಿಲ್ಲ. ಚುನಾವಣೆ ನಡಸೋದು ಈ ರೀತಿಯಲ್ಲ ಎಲ್ಲರನ್ನೂ ಒಂದು ಸಲ ಕೇಳಬೇಡವೆ?' ಎಂದ

'ಅಗತ್ಯವಾಗಿ. ನೀ ಏನೂ ಹೇಳಲಿಲ್ಲ. ನಿಂಗೆ ಒಪ್ಪಿಗೆ ಇದೆ ಯೇನೋ ಎಂದುಕೊಂಡಿದ್ದೆವು. ಒಪ್ಪಿಗೆ ಇಲ್ಲದಿದ್ದರೆ ನಿನ್ನ ಅಭಿಪ್ರಾಯ ಏನಿದೆಯೋ ತಿಳಿಸಬಹುದಲ್ಲ' ಎಂದು ಹಿರಿಯರೊಬ್ಬರು ಹೇಳಿದರು.

'ಇದು ಸರಿಯಲ್ಲ. ಸರಿಯಾಗಿ ಚುನಾವಣೆ ಆಗ್ಬೇಕು. ಊರವರ ಅಭಿಪ್ರಾಯ ತಕೋಬೇಕು' ಎಂದ, ಚಿನ್ನಯ್ಯ.

'ಆದರೆ ಪಂಚಾಯತಿ ರೂಲ್ಸ್ ಪ್ರಕಾರ ಪಂಚಾಯಿತಿ ಸದಸ್ಯರು ಒಪ್ಪಿದರೆ ಸಾಕು' ಎಂದರು, ಆ ಹಿರಿಯ ಸದಸ್ಯರು.

'ಹೌದು. ಚಿನ್ನಯ್ಯ ಹೇಳುವುದೂ ಸರಿ. ಮುಂದಿನ ಸೋಮವಾರ ಊರಿನ ಸಭೇ ಕರೆದು ಸಭೆಯ ಅಭಿಪ್ರಾಯಾನೇ ತೆಗೆದುಕೊಳ್ಳೋಣ' ಎಂದ ಚಂದ್ರಶೇಖರ.

'ಧಾರಾಳವಾಗಿ ಆಗಲಿ. ಅದೇ ಸೂಕ್ತ. ಸದ್ಯ, ಈ ನೊಗವನ್ನು ಬೇರೆ ಯಾರಾದರೂ ಹೊರೋದಾದರೆ ನನಗೆ ಸಂತೋಷವೇ' ಎಂದರು, ಶಾನುಭೋಗರು.

ಮುಂದಿನ ಸೋಮವಾರ ಊರಿನ ಪಂಚಾಯತಿಯ ಅಧ್ಯಕ್ಷರ ಚುನಾವಣೆ ನಡಸಲು ಊರ ಚಾವಡಿಯಲ್ಲಿ ಸಭೆ ಸೇರುವುದೆಂದು ಸಾರಿದ್ದಾಯಿತು.

ಅಂದಿನ ಸಭೆಯಲ್ಲಿ ಶಾನುಭೋಗರೇ ಚುನಾಯಿತರಾದರು. ಚಿನ್ನಯ್ಯನ ಹೆಸರು ಸೂಚಿಸಿದರೂ ಯಾರೂ ಅದನ್ನು ಕಿವಿಗೇ ಹಾಕಿಕೊಳ್ಳಲಿಲ್ಲ.

ಇದಾದ ಒಂದೆರಡು ತಿಂಗಳಲ್ಲೇ ಆ ತಾಲ್ಲೂಕಿನ ಪ್ರಜಾಪ್ರತಿನಿಧಿ ಸಭೆಗೆ ತೆರವಾದ ಸ್ಥಾನಕ್ಕೂ ಚುನಾವಣೆ ನಡೆಯಿತು.

ಚಿನ್ನಯ್ಯ ಇದಕ್ಕೂ ನಿಂತ. ಆ ಊರಿನಿಂದ ಬೇರೆ ಯಾರೂ ನಿಲ್ಲಲು ಇಷ್ಟವುಳ್ಳವರಾಗಿರಲಿಲ್ಲ.

ಪಕ್ಕದ ಹಳ್ಳಿಯಿಂದ ಇನ್ನೊಬ್ಬರು ನಿಂತರು. ಅವರು ಬಹುಕಾಲದಿಂದ ಸುಬ್ಬಯ್ಯಗೌಡರಿಗೆ ವಿರುದ್ಧವಾಗಿ ಸ್ಪರ್ಧಿಸಿ ತಮ್ಮ ಠೇವಣಿ ಕಳೆದುಕೊಳ್ಳುತ್ತಿದ್ದರು.

ನಮ್ಮೂರಿಗೆ ದೊರೆತ ಗೌರವ ನಮ್ಮೂರಿನಲ್ಲೇ ನಿಲ್ಲಬೇಕು. ಅದಕ್ಕೋಸ್ಕರ ನಾನು ಚುನಾವಣೆಗೆ ನಿಂತಿದೇನೆ ಎಂದು ಚಿನ್ನಯ್ಯ ತನ್ನ ಊರಿನವರಲ್ಲಿ ಪ್ರಚಾರ ಮಾಡುತ್ತಿದ್ದ. ಹೊರಗಿನವರಲ್ಲಿ ಮಾತ್ರ, ನಮ್ಮ ಸೋದರಮಾವನವರ ಆದರ್ಶವೇ ನನ್ನ ಆದರ್ಶ. ಅವರನ್ನು ಚುನಾಯಿಸಿ ಕಳಿಸಿದ ನೀವು ಈಗ ನನ್ನನ್ನು ಕಳುಹಿಸಿಕೊಡಬೇಕು—ಎಂದು ಹೇಳುತ್ತಿದ್ದ.

ಈ ಚುನಾವಣೆ ಪ್ರಚಾರಕ್ಕಾಗಿ ಅವನು ಹಣವನ್ನು ನೀರಿನಂತೆ ಚೆಲ್ಲಿದ. ಈ ಹಣವನ್ನೆ ಊರಿಗಾಗಿ ಕೊಟ್ಟಿದ್ದರೆ ಎಷ್ಟೊಂದು ಕೆಲಸ ಮಾಡ ಬಹುದಾಗಿತ್ತು! ಎಂದು ಚಂದ್ರಶೇಖರ ನಿಟ್ಟುಸಿರು ಬಿಟ್ಟ.

ಚುನಾವಣೆ ಇನ್ನು ಒಂದು ತಿಂಗಳಿದೆಯೆನ್ನುವಾಗ ಚಿನ್ನಯ್ಯ ಒಂದು ಟ್ಯಾಕ್ಸಿಯನ್ನು ಬಾಡಿಗೆಗೆ ನೇಮಿಸಿಕೊಂಡ. 'ಚಿನ್ನಯ್ಯನವರಿಗೇ ನಿಮ್ಮ ಘನವಾದ ಓಟನ್ನು ಕೊಡಿರಿ' ಎಂಬ ದಪ್ಪಕ್ಷರದ ಜಾಹಿರಾತನ್ನು ಹೊತ್ತು ಆ ಮೋಟಾರು ಊರೂರು ತಿರುಗಿತು.

ಚುನಾವಣೆಯ ದಿನವೂ ಬಂತು. ಅದು ನೀಲಾವರದಲ್ಲಿ ನಡೆಯ ಬೇಕಾಗಿತ್ತು.

ಚಿನ್ನಯ್ಯ, ತನಗೆ ಓಟು ಕೊಡುವುದಾಗಿ ಹೇಳಿದವರನ್ನೆಲ್ಲಾ ಚುನಾ ವಣೆ ನಡೆಯುತ್ತಿದ್ದ ಸ್ಥಾನಕ್ಕೆ ಗಾಡಿಯಲ್ಲಿ ತಂದುಬಿಟ್ಟು ಗಾಡಿಯಲ್ಲಿ ಕರೆದು ಕೊಂಡು ಹೋಗುವ ವ್ಯವಸ್ಥೆ ಮಾಡಿದ್ದ. ನಡುವೆ ಅವರಿಗೆ ಅಲ್ಲಿ ಉಚಿತ ವಾಗಿ ಉಪಾಹಾರ, ಊಟಗಳ ವ್ಯವಸ್ಥೆಯೂ ಆಗಿತ್ತು. ಕೆಲವರಿಗೆ ಓಟಗೊಂದು ರೂಪಾಯಿಯಂತೆ ಹಣವನ್ನೂ ಕೊಟ್ಟನೆಂದು ಪ್ರತೀತಿ ಯಾಗಿತ್ತು.

ಅಂತೂ 'ಓಟರು ಮಹಾಶಯರುಗಳು' ಗಾಡಿಯಲ್ಲಿ ಬಂದು, ಅವರಲ್ಲಿ ತಿಂಡಿ ತಿನ್ನುವವರು ತಿಂಡಿ ತಿಂದು, ಊಟ ಮಾಡುವವರು ಊಟ ಮಾಡಿ, ಕೆಲವರು ಎರಡನ್ನೂ ಪೂರೈಸಿಕೊಂಡು, 'ಕತ್ತರಿಯ ಗುರುತು' ಹಾಕಿ ಗಾಡಿಯಲ್ಲಿ ತೆರಳಿದರು. ಚಿನ್ನಯ್ಯನದು ನೇಗಿಲ ಗುರುತು. ಅವನ ಪ್ರತಿಸ್ಪರ್ಧಿಯದು ಆನೆಯ ಗುರುತು.

ಚುನಾವಣೆಯ ಸಂಜೆ ಚಿನ್ನಯ್ಯನಿಗೆ ಸ್ವರ್ಗವೇ ಮೂರು ಬೆರಳಿನ ದೂರದಲ್ಲಿದ್ದಷ್ಟು ಸಂತೋಷವಾಗಿತ್ತು. ಯಾರನ್ನು ಕೇಳಿದರೂ, 'ನಿಮ ಗಲ್ಲದೆ ಇನ್ನು ಯಾರಿಗೆ ಓಟು?' ಎನ್ನುತ್ತಿದ್ದರು ಅವನ ಹಿಂಬಾಲಕ ರಂತೂ, 'ಹಾಗೆ ಮಾಡಿದೇವೆ, ಹೀಗೆ ಮಾಡಿದೇವೆ ಪ್ರತಿಸ್ಪರ್ಧಿ ಲಾಗ ಹಾಕಿದ' ಎಂದು ಬಡಾಯಿ ಕೊಚ್ಚುತ್ತಿದ್ದರು.

ಈ ಚುನಾವಣೆಗಳಲ್ಲಿ ಸಾಕಷ್ಟು ಸಾರಿ ಪರಾಜಯ ಹೊಂದಿ ಅನುಭವ ಹೊಂದಿದ್ದ ಆನೆಯ ಲಾಂಛನಧಾರಿ ಭೀಮಯ್ಯ ದಟ್ಟವಾಗಿ ಬೆಳೆದಿದ್ದ ಮೀಸೆಯ ಸಂದಿನಿಂದ ನಗುತ್ತಿದ್ದ.

ಓಟಿನ ಎಣಿಕೆಯೂ ಆಯಿತು ನೇಗಿಲಿಗಿಂತ ಆನೆಗೇ ಹೆಚ್ಚು ಮತ ಬಂದಿತ್ತು. ಅಂತೂ ಕೊನೆಗೂ ಭೀಮಯ್ಯ ಗೆದ್ದ. ಚಿನ್ನಯ್ಯನಿಗೆ ಅತಿ ಕಡಮೆ ಓಟು ಬಂದಿದ್ದು ಅವನ ಠೇವಣಿಯೂ ಕಳೆದು ಹೋಯಿತು.

ಹಿಂದೆ ಪ್ರತಾಪ ಕೊಚ್ಚಿಕೊಂಡಿದ್ದ ಅವನ ಹಿಂಬಾಲಕರೆಲ್ಲ ಎಲ್ಲೋ ಮಾಯವಾಗಿದ್ದರು.

ಚಿನ್ನಯ್ಯನೂ ಸ್ವಲ್ಪಕಾಲ ಮನೆ ಬಿಟ್ಟು ಹೊರಗೆ ಬರುತ್ತಿರಲಿಲ್ಲ

೧೪

ಒಂದು ದಿನ ಇದ್ದಕ್ಕಿದ್ದಂತೆಯೇ ಊರಿನಲ್ಲೆಲ್ಲ ಒಂದು ಗುಲ್ಲೆದ್ದಿತು. ಓಬಯ್ಯನ ಮನೆಯಲ್ಲಿ ಇಲಿ ಸತ್ತಿತ್ತಂತೆ.

ಇಲಿ ಸಾಯುವುದೂ, ಪ್ಲೇಗು ಬರುವುದೂ ಆ ಊರಿಗೇನೂ ಹೊಸದಲ್ಲ. ಪ್ರತಿವರ್ಷವೂ ಬರಬೇಕಾದ ಮಳೆ ತಪ್ಪಿದರೂ ಪ್ಲೇಗು ತಪ್ಪುತ್ತಿರಲಿಲ್ಲ. ಆದರೆ ಕಳೆದ ವರ್ಷ ಮಾತ್ರ, ಚಂದ್ರಶೇಖರ ಬಂದಿದ್ದರಿಂದಲೋ ಎನ್ನುವ ಹಾಗೆ, ಅದು ಬಂದಿರಲಿಲ್ಲ. ಆದರೆ ಈ ವರ್ಷ ಯಥಾಪ್ರಕಾರ ಅದರ ಆಗಮನದ ಸೂಚನೆ ಕಾಣಿಸಿಕೊಂಡಿತ್ತು.

ಈ ಸಮಾಚಾರ ಕೂಡಲೇ ಊರಿನಲ್ಲೆಲ್ಲ ಕಾಡುಕಿಚ್ಚಿನಂತೆ ಹಬ್ಬಿತು. ಪ್ರತಿವರ್ಷವೂ ಇದು ಬರುವುದೇ ಆದರೂ ಪ್ರತಿವರ್ಷವೂ ಜನ ಗಾಬರಿಗೊಳ್ಳುವುದು ತಪ್ಪಿರಲಿಲ್ಲ. ಅದನ್ನು ತಡೆಗಟ್ಟುವ ಮಾರ್ಗ ಯೋಚಿಸಿರಲಿಲ್ಲ.

ಊರ ಮಾರಮ್ಮ ಕೋಪಿಸಿಕೊಂಡಳೆಂದು ಕೂಡಲೇ ಆ ಕೋಪ ಶಮನ ಮಾಡಲು ಎಲ್ಲ ಕಾರ್ಯಕ್ರಮಗಳೂ ನಡೆದವು. ಮಾರಮ್ಮನ ಭಕ್ತರು ಊರಿನಲ್ಲೆಲ್ಲ 'ಪಡಿ' ವಸೂಲು ಮಾಡಿದರು. ಒಂದು ದಿನ

ಬೆಳಗ್ಗೆ ಆಕೆಯು ಪೂಜೆಗೆ ಎಲ್ಲ ಅಣಿಯಾಯಿತು. ಆ ದಿನದ ಪೂಜೆಯ ಸಮಯದಲ್ಲಿ ಬಲಿ ಕೊಡಲು ಒಂದು ಹೋತನನ್ನು ಊರಿನಲ್ಲೆಲ್ಲಾ ಮೆರವಣಿಗೆ ಮಾಡಿ ತಂದು ಮಾರಮ್ಮನ ಮುಂದೆ ನಿಲ್ಲಿಸಿದರು.

ಆದರೆ ಚಂದ್ರಶೇಖರನಿಗೆ ಇದು ಸರಿಕಾಣಲಿಲ್ಲ. ನರಸಿಂಹಯ್ಯ ನವರೊಡನೆ ಈ ವಿಚಾರ ಚರ್ಚಿಸಿದ. ಅವರು, ಈ ವಿಚಾರದಲ್ಲಿ ಊರಿ ನವರ ಮನಸ್ಸನ್ನು ಪರಿವರ್ತಿಸುವುದು ಸುಲಭವಲ್ಲ' ಎಂದರು.

'ಏನಾದರಾಗಲಿ. ಅದನ್ನು ನಿಲ್ಲಿಸಲೇಬೇಕು' ಎಂದ ಚಂದ್ರ ಶೇಖರ.

ಇನ್ನು ಕೆಲವರು ಹಿರಿಯರು, ಶಾನುಭೋಗರು, ಇವರೆಲ್ಲರೂ,—

'ಪ್ರಾಣಿಬಲಿಯೇನೋ ತಪ್ಪು, ಎಂದು ನಮಗೂ ತೋರುತ್ತೆ. ಆದರೆ ಅದನ್ನ ನಿಲ್ಲಿಸಿದರೆ ಏನು ಅನರ್ಥವಾದೀತೋ ಎಂದು ಅಂಜಿಕೆಯೂ ಇದೆಯಲ್ಲ ಇಷ್ಟಕ್ಕೂ ಆ ಕರ್ಮ ನಾವು ಮಾಡುವುದಿಲ್ಲ ಮಾಡು ವವರು ಮಾಡಿಕೊಳ್ಳಲಿ. ನಾವು ಪ್ರೋತ್ಸಾಹಿಸದಿದ್ದರೆ ಸರಿ' ಎಂದರು.

ಈ ಮಾತು ಕೇಳಿ ಚಂದ್ರಶೇಖರನಿಗೆ ನಗೆ ಬಂತು. ನಾಲ್ಕಾರು ಜನರೊಡನೆ ಆ ವಧಾಸ್ಥಾನಕ್ಕೆ ಬಂದ.

ಅಲ್ಲಿ ಸೇರಿದ್ದ ಭಕ್ತರೊಡನೆ ಈ ಕೆಲಸ ತಪ್ಪೆಂದು ಎಷ್ಟೆಷ್ಟೋ ವಾದಿ ಸಿದ. ಆದರೆ ಅವರು ನಕ್ಕು,—

'ಹೋಗು, ಹೋಗು ಚಂದ್ರಪ್ಪ. ನಿಂಗೆ ಈ ವಿಚಾರ ಇನ್ನೂ ಗೊತ್ತಿಲ್ಲ. ಹಂಗಂದ್ರೆ ನಿಂಗೆ ಅಗೌರವ ಮಾಡಿದೆವು ಅಂತ ಅಂದ್ಕೋ ಬೇಡ' ಎಂದರು.

'ದೇವರುಗಳು ಲಂಚಕೋರರಲ್ಲ. ಹಾಗೇನಾದರೂ ಇದ್ದರೆ ನನ್ನನ್ನು ಕಡೀರಿ. ಹೋತನಿಗಿಂತ ಮನುಷ್ಯನಿಗೆ ಬೆಲೆ ಹೆಚ್ಚು. ಹೋತನನ್ನ ಕೊಂದದ್ದರಿಂದ ಒಂದು ವರ್ಷಕಾಲ ಒಳ್ಳೆಯದಾಗೋದಾದರೆ ಮನುಷ್ಯ ನನ್ನ ಕೊಂದದ್ದರಿಂದ ಹತ್ತಾರು ವರ್ಷವಾದರೂ ನೆಮ್ಮದಿಯಾಗಿರ ಬಹುದು' ಎಂದ.

ಆ ಜನ ಇವನ ಮಾತು ಕೇಳಲಿಲ್ಲ. ಚಂದ್ರ ಅಲ್ಲೇ ಕೂತುಬಿಟ್ಟ ಎರಡು ಕಡೆಯಲ್ಲಿ ಯಾರೂ ಜಗ್ಗಲಿಲ್ಲ.

ಕೊನೆಗೆ ಚಂದ್ರಶೇಖರ ಇನ್ನೊಂದು ಸೂಚನೆ ಮಾಡಿದ 'ಹೇಗಿದ್ದರೂ ಮಾರಮ್ಮನಿಗೆ ಈ ಹೋತ ಬೇಕಾಗಿದೆಯೆಂದು ಹೇಳಿದೀರಿ. ಬೇಕಾಗಿದ್ದರೆ ಆಕೆಯೇ ತೆಗೆದುಕೊಳ್ಳಲಿ. ನೀವು ಈ ಹೋತನನ್ನು ಇಲ್ಲಿಯೇ ಕಟ್ಟಿಹಾಕಿ ನಾಲ್ಕಾರು ಗಂಟೆ ಸುಮ್ಮನಿರಿ. ಹೋತನನ್ನು ಬಲಿ ಕೊಟ್ಟರೆ ಏನೇನು ವಿಧಿ, ನಿಯಮ ಅನುಸರಿಸುತ್ತಿದ್ದಿರೋ ಅದನ್ನೆಲ್ಲ ಅನುಸರಿಸಿ ಆಕೆಗೆ ಬೇಕೆನಿಸಿದರೆ ಅವಳೇ ಇದರ ಪ್ರಾಣ ಹೋಗಿಸಿ ಸ್ವೀಕರಿಸಲಿ ಊರ ಜನರ ಪ್ರಾಣ ಕಳೆಯಿಸುವ ಮಾರಮ್ಮ ಇದನ್ನು ಮಾಡಲಾರಳೆ? ಆಕೆಗೆ ಬೇಡವೆಂದಾದರೆ ಈ ಹೋತ ಜೀವಂತವಾಗಿ ಉಳಿದುಕೊಳ್ಳಲಿ' ಎಂದ

ಜನ ಮೊದಲು ಇದನ್ನು ಒಪ್ಪಲಿಲ್ಲ. ಆದರೆ ತಳ್ಳಿಹಾಕಲು ಸಾಧ್ಯವಿರಲಿಲ್ಲ. ಅದು ಅಷ್ಟೊಂದು ವಾದಬದ್ಧವಾಗಿತ್ತು.

ಕೊನೆಗೆ ಹಾಗೆಯೇ ಮಾಡಿದರು. ಹೋತ ಬದುಕಿಕೊಂಡಿತು.

ಆದರೂ ಜನರ ಮನಸ್ಸಿನಲ್ಲಿ ಅಳುಕೇನೋ ಇದ್ದೇ ಇತ್ತು.

ಈ ನಡುವೆ ಪ್ಲೇಗು ಸುಮ್ಮನಿರಲಿಲ್ಲ. ಒಬ್ಬೊಬ್ಬರನ್ನಾಗಿ ಆಹುತಿ ತೆಗೆದುಕೊಳ್ಳಲಾರಂಭಿಸಿತ್ತು. ಜನ ಹೆದರಿ ಊರ ಹೊರಗೆ ಗುಡಿಸಿಲು ಹಾಕಿಕೊಂಡು ಜೀವಿಸಲಾರಂಭಿಸಿದರು

ಇನಾಕ್ಯುಲೇಷನ್ನಿಗಾಗಿ ಚಂದ್ರಶೇಖರ ನೀಲಾವರದ ವೈದ್ಯರಿಗೆ ಹೇಳಿಕಳುಹಿಸಿದ ಆದರೆ ವರ್ಷದ ಆ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲ ಹಳ್ಳಿಗಳಿಗೂ ಪ್ಲೇಗು ಬರುತ್ತಿತ್ತು. ಒಬ್ಬೊಂಟಿಗ ವೈದ್ಯರು ಯಾವ ಹಳ್ಳಿಗೆ ಹೋಗುವುದು? ಯಾವ ಹಳ್ಳಿಯನ್ನು ಬಿಡುವುದು? ಅವರೂ ಒಂದೊಂದು ಹಳ್ಳಿಯಾಗಿ ಹೋಗಿ ಬರುತ್ತಿದ್ದರು. ಇದರ ಜತೆಗೆ ನೀಲಾವರದಲ್ಲಿ ಅವರ ಅಧೀನದಲ್ಲಿದ್ದ ಆಸ್ಪತ್ರೆಯನ್ನೂ ಮುಚ್ಚುವ ಹಾಗಿರಲಿಲ್ಲ.

ಸರ್ಕಾರಕ್ಕೂ ಈ ಪ್ಲೇಗಿನ ಸುದ್ದಿ ಮುಟ್ಟಿತ್ತು. ಅವರೂ ಇದಕ್ಕಾಗಿ ಆ ತಾಲ್ಲೂಕಿಗೆ ಪ್ರತ್ಯೇಕ ಡಾಕ್ಟರೊಬ್ಬರನ್ನು ಕಳುಹಿಸುವುದರಲ್ಲಿದ್ದರು. ಆದರೆ ಅವರು ಯಾವಾಗ ಬರುವರೆಂಬುದು ಗೊತ್ತಿರಲಿಲ್ಲ.

ಸರ್ಕಾರಕ್ಕೂ ವೈದ್ಯರು ಸಾಕಷ್ಟು ಸಂಖ್ಯೆಯಲ್ಲಿ ಒದಗುತ್ತಿರಲಿಲ್ಲ ವಂತೆ. ಇದ್ದವರಲ್ಲೂ ಎಷ್ಟೋ ಮಂದಿ ಯುದ್ಧಮುಖಕ್ಕೆ ತೆರಳಿದ್ದರಂತೆ.

ಅಂತೂ ಒಂದು ದಿನ ಡಾಕ್ಟರು ಬಂದರು. 'ಬನ್ನಿ, ಎಲ್ಲರಿಗೂ ಸೂಜಿ ಚುಚ್ಚುತ್ತೇನೆ' ಎಂದರು.

ಆದರೆ ಒಂದು ನರಪಿಳ್ಳೆಯೂ ಸುಳಿಯಲಿಲ್ಲ.

'ನೋಡಿ, ಎಲ್ಲಾ ಊರಿನಲ್ಲೂ ಇದೇ ಗೋಳು' ಎಂದು ಆ ವೈದ್ಯರು ಚಂದ್ರಶೇಖರನಿಗೆ ಹೇಳಿದರು.

ಚಂದ್ರಶೇಖರನೂ ನರಸಿಂಹಯ್ಯನೂ ಬಲವಂತ ಮಾಡಿ ಒಬ್ಬೊಬ್ಬ ರನ್ನಾಗಿ ಹಿಡಿದುಕೊಂಡು ಬಂದು ಚುಚ್ಚಿಸಿದರು. ಹಾಗೂ ತಪ್ಪಿಸಿಕೊಂಡ ವರು ಎಷ್ಟೋ ಮಂದಿ.

ಅವನ ತಾಯಿ ಅತ್ತೆಯರೂ ಚುಚ್ಚಿಸಿಕೊಳ್ಳಲು ಮೊದಲು ಒಪ್ಪಲಿಲ್ಲ. 'ಹೋಗಬೇಕೂಂತ ಹಣೇಲಿ ಬರೆದಿದ್ದರೆ ಸೂಜಿ ಮದ್ದೇನು ಮಾಡಾತು?' ಎಂದಳು ಲಕ್ಕವ್ವ.

ಆದರೆ ಚಂದ್ರಶೇಖರ ಬಿಡಲಿಲ್ಲ. ಚುಚ್ಚಿಸಿಯೇ ಚುಚ್ಚಿಸಿದ.

ಕೊನೆಗೆ ತಾನು ಚುಚ್ಚಿಸಿಕೊಳ್ಳಲು ಕೈ ನೀಡಿದಾಗ ಚಂದ್ರಶೇಖರ ಸಮಾಧಾನದ ನಿಟ್ಟುಸಿರೊಂದನ್ನು ಬಿಟ್ಟ.

'ಈ ಹಳ್ಳಿಯ ಜನ ಇಷ್ಟು ಹಟ ಮಾಡದೇ ಇದ್ದರೆ ಒಂದು ದಿನಕ್ಕೆ ನಾಲ್ಕು ಹಳ್ಳಿಗೆ ಹೋಗಬಹುದು ಈಗ ನೋಡಿ, ಒಂದು ಹಳ್ಳೀಗೇ ಒಂದು ದಿನವೆಲ್ಲಾ ವ್ಯರ್ಥ' ಎಂದರು, ಡಾಕ್ಟರು.

ಅವರು ತಮ್ಮ ಸಾಮಾನನ್ನೆಲ್ಲ ಚಕ್ಕಳದ ಚೀಲದಲ್ಲಿ ಹಾಕಿ ಹೊರ ಡಲು ಸಿದ್ಧರಾದಾಗ ಸೂರ್ಯ ಪಡುವಲ ಬಾನಂಚಿನಲ್ಲಿ ನಿಂತಿದ್ದ. ಡಾಕ್ಟರಿಗೆ ಬೆಳಗಿನಿಂದ ಊಟ ಕೂಡ ಇರಲಿಲ್ಲ. ಚಂದ್ರಶೇಖರ, ನಡುವೆ

ಊಟಕ್ಕೆ ಕರೆದಾಗ, 'ಮೊದಲು ಕೆಲಸ ಆಮೇಲೆ ಊಟ' ಎಂದರವರು. ಅವರ ಜತೆಯಲ್ಲಿ ನರಸಿಂಹಯ್ಯ-ಚಂದ್ರಶೇಖರರಿಗೂ ಊಟವಿರಲಿಲ್ಲ.

ಇದರಿಂದ ಊರಿನ ಪ್ಲೇಗಿನ ಅಬ್ಬರ ಸ್ವಲ್ಪ ಕಡಮೆಯಾಯಿತೆಂದು ಚಂದ್ರಶೇಖರನಿಗೆ ಎನಿಸಿತು. ಆದರೆ ಇದರ ಫಲಿತಾಂಶ ಅಷ್ಟು ಬೇಗ ಗೊತ್ತಾಗುವುದೆ? ಈಗಾಗಲೇ ಪ್ಲೇಗು ತಗುಲಿದ್ದವರು ಸಾಯುತ್ತಲೇ ಇದ್ದರು ಆದರೆ ಹೊಸದಾಗಿ ಹೆಚ್ಚಾಗಿ ಯಾರಿಗೂ ತಗುಲಿರಲಿಲ್ಲ.

ಸತ್ತವರ ಅಂತ್ಯಕ್ರಿಯೆ ಮಾಡುವುದೇ ಒಂದು ದೊಡ್ಡ ಸಮಸ್ಯೆಯಾಗಿತ್ತು. ದೇಹವನ್ನು ಸಾಗಿಸಲು ಬರಲು ಎಲ್ಲರೂ ಹೆದರುತ್ತಿದ್ದರು. ಚಂದ್ರಶೇಖರನೇ ಎಷ್ಟೋ ಬಾರಿ ಹೆಗಲು ಕೊಟ್ಟಿದ್ದ. ಅಂಥ ಸಮಯದಲ್ಲಿ ಎಷ್ಟೋ ಅನಾಥ ಸಂಸಾರಗಳಿಗೆ ಅವನು ಪ್ರತ್ಯಕ್ಷದೇವತೆಯಾಗಿಯೇ ಕಂಡ.

ಅವನು ಆ ರೀತಿ ಓಡಾಡುತ್ತಿದ್ದಾಗ ಎಷ್ಟೋ ಬಾರಿ ಆತನ ಹೆಂಡತಿ ಚಿನ್ನಮ್ಮನಿಗೆ ಅಂಜಿಕೆಯಾಗುತ್ತಿತ್ತು. 'ಬೇಡಿ, ಹೋಗಬೇಡಿ' ಎನ್ನೋಣವೆಂದು ನಾಲಗೆಯ ವರೆಗೂ ಮಾತು ಬರುತ್ತಿತ್ತು. ಆದರೆ ಪ್ರತಿಸಾರಿಯೂ ಹೇಳಲು ಹಿಂದೆಗೆಯುತ್ತಿದ್ದಳು.

ಒಮ್ಮೆ ಸೂಕ್ಷ್ಮವಾಗಿ ಈ ಮಾತು ಹೇಳಿಯೇ ಬಿಟ್ಟಳು.

'ಅಯ್ಯೋ ಹುಚ್ಚಿ! ಕಷ್ಟಕಾಲದಲ್ಲಿ ನಾವೂ ಹಿಂತೆಗೆದರೆ ಅವರನ್ನು ನೋಡಿಕೊಳ್ಳುವವರು ಯಾರು? ನೊಂದವರ ನೋವಿನ ನಡುವೆ ನಾವು ಕಲ್ಲುಮನಸ್ಸಿನಿಂದ ಇರೋದು ಸಾಧ್ಯವೆ?' ಎಂದನವನು 'ನೀನೂ ನಿನ್ನ ಕೈಲಾದ ಸಹಾಯ ಮಾಡಿದರೆ ಸಂತೋಷ. ಆದರೆ ನಾ ಒತ್ತಾಯ ಮಾಡೋಲ್ಲ' ಎಂದ.

ಮರುದಿನದಿಂದ ಗಂಜಿ ಕಾಯಿಸಿ ಅದನ್ನು ಮನೆಮನೆಗೆ ಹೊತ್ತು ತಿರುಗುವುದು ಚಿನ್ನಮ್ಮನ ಕೆಲಸವಾಯಿತು. ಚಂದ್ರಶೇಖರ ಹೇಳಿದ ಮಾತು ಅವಳ ಮನಸ್ಸಿಗೆ ನಾಟಿತ್ತು.

ಇಷ್ಟೆಲ್ಲಾ ಓಡಾಡಿದರೂ ಈ ರೋಗ ತಮಗೆ ಸೋಂಕದಂತೆ ಏನೇನು ಪ್ರತಿರೋಧ ಕಾರ್ಯ ಮಾಡಬೇಕೋ ಅದನ್ನೆಲ್ಲ ಚಂದ್ರಶೇಖರ ಕಟ್ಟು

ನಿಟ್ಟಾಗಿ ಆಚರಣೆಗೆ ತಂದುಕೊಂಡಿದ್ದ. ಚಿನ್ನಮ್ಮನಿಗೂ ಆ ಬಗ್ಗೆ ಒತ್ತಾಯಪಡಿಸಿ ತಿಳಿಸಿದ್ದ.

ಚಂದ್ರಶೇಖರನ ಎಲ್ಲ ಕಾರ್ಯದಲ್ಲೂ ನರಸಿಂಹಯ್ಯನವರೂ ಭುಜಕ್ಕೆ ಭುಜ ಕೊಟ್ಟು ಸಹಕರಿಸಿ ದುಡಿಯುತ್ತಿದ್ದರು.

ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಚಿನ್ನಮ್ಮನ ತಾಯಿ ಲಕ್ಕವ್ವನಿಗೆ ಜ್ವರ ಕಾಣಿಸಿಕೊಂಡಿತು. ಏನೋ ಜ್ವರ. ಇನಾಕ್ಯುಲೇಷನ್ ಹಾಕಿಸಿಕೊಂಡದ್ದಕ್ಕಿರಬಹುದು ತಾನಾಗಿಯೇ ಸರಿಹೋಗುವುದೆಂದು ಮನೆಯವರು ಸುಮ್ಮನಾದರು ಆದರೆ ಮರುದಿನದ ವೇಳೆಗೆ ವಿಪರೀತಕ್ಕಿಟ್ಟುಕೊಂಡಿತು

ಚಿನ್ನಯ್ಯ ನೀಲಾವರದಿಂದ ಡಾಕ್ಟರನ್ನು ಕರಸಿದ. ಡಾಕ್ಟರು,—

'ತೀರಾ ವಿಷಮಿಸಿದೆ. ಬಹು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ನಾ ಮಾಡುವುದು ಮಾಡುತ್ತೇನೆ' ಎಂದರು.

ಚಂದ್ರಶೇಖರನೂ ಚಿನ್ನಯ್ಯನೂ ತಮ್ಮ ಮನಸ್ಸಿನ ಮುಸುಕು ಕಳೆದು ಲಕ್ಕವ್ವನ ಹಾಸಿಗೆಯ ಬಳಿ ಪಕ್ಕಪಕ್ಕದಲ್ಲೇ ಕುಳಿತು ಆರೈಕೆ ಮಾಡಿದರು. ಇತರರಿಗೆ ರೋಗ ಬಂದರೆ ಅದು ಸೋಂಕದ ಹಾಗೆ ದೂರವಿರಬಹುದು. ಆದರೆ ತಮ್ಮವರಿಗೇ ಬಂದಾಗ ಹಾಗೆ ದೂರವಿರುವುದು ಹೇಗೆ ಸಾಧ್ಯ?

ಆದರೆ ಲಕ್ಕವ್ವ ಉಳಿಯಲಿಲ್ಲ ಹೋಗುವ ಮುನ್ನ ಅವಳಿಗೆ ಜ್ಞಾನ ಬಂದಿತ್ತು:

'ಚಂದ್ರಾ, ಚಿನ್ನಾ, ನೀವಿಬ್ಬರೂ ನನಗೆ ಬೇರೆಬೇರೆಯಲ್ಲ ಒಟ್ಟಿಗೆ ಚೆನ್ನಾಗಿರ್ತೀವಿ ಅಂತ ಬಾಸೆ ಕೊಡಿ. ಸಂತೋಷದಿಂದ ಪ್ರಾಣ ಬಿಡ್ತೀನಿ.' ಎಂದು ಹೇಳಿದಳು. ಅವರಿಬ್ಬರ ಕೈಯನ್ನೂ ಕೂಡಿಸಿದಳು. ಇಬ್ಬರ ಕಣ್ಣಿಂದಲೂ ನಾಲ್ಕು ಹನಿ ನೀರು ಆಕೆಯ ಎದೆಯ ಮೇಲೆ ಬಿತ್ತು. ಆ ಹನಿ ಬೀಳುವಾಗ, ಹೊರಗಿನಿಂದ ಜಾರಿದ್ದ ಬೆಳಕಿನಲ್ಲಿ ಅದು ಮುತ್ತಿನ ಹಾಗೆ ಹೊಳೆಯಿತು. ಆ ಬೆಳಕನ್ನು ಹುಡುಕಲೋ ಎನ್ನುವಂತೆ ಲಕ್ಕವ್ವನ ಜೀವ ಬಿಡುಗಡೆ ಹೊಂದಿತ್ತು.

ತಾಯಿ ಹೋದ ಮೇಲೆ ಚಿನ್ನಯ್ಯ ಹೊಸ ಮನುಷ್ಯನಾದ. ಅವನ ಹೃದಯವನ್ನು ಕವಿದಿದ್ದ ಮತ್ಸರದ ಹೊದಿಕೆ ಹಾರಿಹೋಯಿತು. ಜಗತ್ತಿನಲ್ಲಿ ತನಗಿದ್ದವಳು ತಾಯಿಯೊಬ್ಬಳೇ. ಆಕೆ ಹೋದ ಮೇಲೆ ಆತ ಒಬ್ಬೊಂಟಿಗ, ತಬ್ಬಲಿ. ಆಕೆಯಿರುವವರೆಗೂ ಆಕೆಯ ಬೆಲೆಯನ್ನು ಅಷ್ಟಾಗಿ ಅರಿತುಕೊಂಡಿರಲಿಲ್ಲ. ಆದರೆ ಆಕೆ ಹೋದ ಮೇಲೆ ತನ್ನದೆಲ್ಲ ಹೋದ ಹಾಗೆ ಭಾಸವಾಯಿತವನಿಗೆ. ಈ ಪಶ್ಚಾತ್ತಾಪದ ನಿಬ್ಬೆಳಕಿನಲ್ಲಿ ಚಂದ್ರಶೇಖರನ ತಿಳಿಯಾದ ಮನಸ್ಸು ಕಾಣತೊಡಗಿತವನಿಗೆ. ಚಂದ್ರಶೇಖರ ಬಯಸಿದ್ದರೆ ಸುಖವಾಗಿರಬಹುದಾಗಿತ್ತು. ಆದರೆ ಊರಿಗಾಗಿ ಎಲ್ಲ ತೊರೆದು ಬಡತನವನ್ನಪ್ಪಿದ್ದ. ಅವನ ಒಂದೊಂದು ಕೆಲಸವನ್ನೂ ತಪ್ಪಾಗಿ ಗುರುತಿಸಿ ಅವನ ಮನ ನೋಯಿಸಿದೆನಲ್ಲಾ ಎಂದುಕೊಂಡ, ಚಿನ್ನಯ್ಯ

ಊರಿನಲ್ಲಿ ತಕ್ಕ ವೈದ್ಯಸಹಾಯವಿದ್ದಿದ್ದರೆ ತಾಯಿ ಬದುಕುತ್ತಿದ್ದಳೇನೋ ಎಂದೂ ಅವನಿಗೆ ಎನಿಸಿತು. ಹಿಂದೆ ಊರಿಗೆ ಆಸ್ಪತ್ರೆ ಬೇಕೆಂದು ಚಂದ್ರಶೇಖರ ಹೇಳಿದಾಗ ತಾತ್ಸಾರ ಮಾಡಿದ್ದ ತಾನು, ಇಂದು, ತಾಯಿ ಹೋದ ಮೇಲೆ, ಅದರ ಅಗತ್ಯವನ್ನು ಅರ್ಥ ಮಾಡಿಕೊಂಡ. ಇದನ್ನು ತಿಳಿಯುವುದಕ್ಕಾಗಿ ಅವನು ತನ್ನ ಸಿಧಿಯನ್ನೇ ತ್ಯಾಗಮಾಡಿದ್ದ.

ಲಕ್ಕವ್ವನ ಅಂತ್ಯಕರ್ಮವೆಲ್ಲ ಪೂರೈಸಿತು ಆ ವೇಳೆಗೆ ಪ್ಲೇಗು ನಿಂತ ಸೂಚನೆಗಳು ಕಂಡುಬಂದುವು. ಮುಂದಿನ ಅಮಾವಾಸ್ಯೆಗೆ ಊರು ಬಿಟ್ಟು ಒಂದು ತಿಂಗಳಾಗುತ್ತಿತ್ತು. ಅದು ಕಳೆದ ಮೇಲೆ ಜನರೆಲ್ಲ ಊರಿಗೆ ಹಿಂದಿರುಗಲಾರಂಭಿಸಿದರು.

ಒಂದು ದಿನ ಚಂದ್ರಶೇಖರ ಚಿನ್ನಯ್ಯನನ್ನು ಮಾತಾಡಿಸಿ ಸಮಾಧಾನ ಪಡಿಸಲು ಬಂದಿದ್ದ. ಆಗ ಚಿನ್ನಯ್ಯ ಮೆಲ್ಲನೆ, 'ಚಂದ್ರಾ' ಎಂದ.

'ಏನು ಚಿನ್ನಣ್ಣ?' ಎಂದ ಚಂದ್ರ. ಆಗ ಚಂದ್ರ-ಚಿನ್ನಯ್ಯರ ಸ್ನೇಹ, ಸೋದರ್ಯದ ಸ್ನೇಹವನ್ನೇ ನಾಚಿಸುವ ಹಾಗಿತ್ತು.

'ನಾ ಮಾಡಿದ್ದೆಲ್ಲಾ ಮರೆತುಬಿಡೋ ಚಂದ್ರಾ' ಎಂದ, ಚಿನ್ನಯ್ಯ

ಚಂದ್ರನ ಮನಸ್ಸಿನಲ್ಲಿ ಚಿನ್ನಯ್ಯನ ಹಿಂದಿನ ನಡತೆಯ ನೆನಪೇನೂ ಉಳಿದಿರಲಿಲ್ಲ ಕರ್ಪೂರ ಸುಟ್ಟ ಹಾಗೆ ಅವನ ಮನಸ್ಸು ಶುದ್ಧವಾಗಿತ್ತು

'ಮರೆಯೋಕೇನದೆ, ಚಿನ್ನಣ್ಣ' ಎಂದ

ಇಬ್ಬರ ಕಂಠವೂ ಬಿಗಿದು ಬಂದಿದ್ದವು. ಬಹಳ ಹೊತ್ತಾದ ಮೇಲೆ ಚಿನ್ನಯ್ಯ,—

'ಆಸ್ಪತ್ರೇಗೆ ಎಷ್ಟಾಗ್ತದೋ, ಚಂದ್ರ' ಎಂದ

'ಎಷ್ಟಾದ್ರೂ ಆದೀತು. ಜೋಪಡೀಲಾದ್ರೂ ಆದೀತು. ಒಳ್ಳೆ ಗಾಳಿ ಬೆಳಕು ಬರೋ ಕಟ್ಟಡ ಆದ್ರೂ ಆದೀತು. ಅದಕ್ಕೆ ಬೇಕಾಗಿ ರೋದು ಒಳ್ಳೆ ಮನಸ್ಸು, ನಡಸೋ ಧೈರ್ಯ'

'ನಾಳೆಯಿಂದ್ಲೇ ಅದಕ್ಕೆ ಏರ್ಪಾಡು ಮಾಡೋಣ. ನೀ ದುಡ್ಡಿನ್ ಯೋಚನೆ ಮಾಡಬೇಡ ಊರಿಗೋಸ್ಕರ ನೀ ಏನು ಹೇಳಿದರೂ ನಾನು ಮಾಡೋಕೆ ಸೈ' ಎಂದ ಚಿನ್ನಯ್ಯ

ಚಿನ್ನಯ್ಯನ ಮನಸ್ಸಿನ ಧಾರಾಳ ನೋಡಿ ಚಂದ್ರಶೇಖರನಿಗೆ ಏನು ಹೇಳಬೇಕೆಂದು ತೋಚಲಿಲ್ಲ. ತುಂಬು ಹೃದಯದಿಂದ ಅವನ ಕೈ ಹಿಡಿದುಕೊಂಡು, 'ಚಿನ್ನಣ್ಣ!' ಎಂದ. ಅವನ ಕಣ್ಣಿಂದ ಎರಡು ಬಿಸಿ ಹನಿ ಚಿನ್ನಣ್ಣನ ಕೈಯ ಮೇಲೆ ಉದುರಿತು. . . .

ಆಸ್ಪತ್ರೆಯ ವಿಚಾರವನ್ನು ಚಂದ್ರಶೇಖರ ಕೂಡಲೇ ನರಸಿಂಹಯ್ಯನವರಿಗೆ ತಿಳಿಸಿದ. ಅವರು ಎಲ್ಲವನ್ನೂ ಕೇಳಿ,

'ನೋಡಿ, ಚಂದ್ರಶೇಖರಯ್ಯ, ಮನುಷ್ಯರು ಸ್ವಭಾವತಃ ಕೆಟ್ಟವರೂ ಅಲ್ಲ ಒಳ್ಳೆಯವರೂ ಅಲ್ಲ .ನೀರಿನ ಮೇಲೆ ಬೊಬ್ಬುಳಿಕೆ ಕೂತ ಹಾಗೆ ಸುತ್ತಣ ಆವರಣದಿಂದ ಅವರ ಹೃದಯದ ಮೇಲೆ ಅಹಂಭಾವ ಕವಿದಿರುತ್ತೆ. ಅದನ್ನ ಕಡ್ಡಿಯಿಂದ ಚುಚ್ಚಿ ಒಡೆದರೆ ಒಳಗೆ ತಿಳಿನೀರಿನ 'ಕಾಸಾರವೇ' ಎಂದರು.

ಚಂದ್ರಶೇಖರನಾಗಲೇ ಆ ಮಾತಿನ ಹಿಂದಣ ಸತ್ಯವನ್ನು ಮೆಲುಕು ಹಾಕಲಾರಂಭಿಸಿದ್ದ.

## ೧೫

ಆಸ್ಪತ್ರೆಯ ಏರ್ಪಾಟಿನ ವಿಚಾರವಾಗಿ ಮರುದಿನದಿಂದಲೇ ಕಾರ್ಯಾರಂಭವಾಗಿತ್ತು. ಅದು ಬರೀ ಆಸ್ಪತ್ರೆಯೇ ಆಗಿರದೆ ಒಂದು ಆರೋಗ್ಯಕೇಂದ್ರವೂ ಆಗಿರಬೇಕು, ಸೂತಿಕಾಗೃಹವೂ ಅದಕ್ಕೆ ಕೂಡಿರಬೇಕು—ಎಂದು ಚಂದ್ರಶೇಖರನ ಇಷ್ಟ ಕೂಡಲೇ ಸರ್ಕಾರದ ಸಹಾಯವನ್ನೂ ಅಪೇಕ್ಷಿಸಿ ಕಾಗದ ಬರೆದ.

ಸರ್ಕಾರದವರೂ ಆ ಸುತ್ತಿಗೆ ಇಂಥ ಆಸ್ಪತ್ರೆಯೊಂದರ ಅಗತ್ಯವನ್ನು ಕಂಡುಕೊಂಡಿದ್ದರು. 'ನೀವು ಕಟ್ಟಡ ಕಟ್ಟಿಸಿಕೊಟ್ಟು, ವರ್ಷಂಪ್ರತಿ ಖರ್ಚಿನ ಮೂರರಲ್ಲೊಂದು ಪಾಲು ಕೊಡಲು ಒಪ್ಪುವುದಾದರೆ ಉಳಿದದ್ದರಲ್ಲಿ ಒಂದು ಪಾಲು ಜಿಲ್ಲಾಬೋರ್ಡೂ, ಇನ್ನೊಂದು ಪಾಲು ಸರ್ಕಾರವೂ ಕೊಡುತ್ತದೆ' ಎಂದು ಜವಾಬು ಬಂದಿತ್ತು. ಆದ್ದರಿಂದ ಕಟ್ಟಡದ ಕೆಲಸ ಭರದಿಂದ ಸಾಗಿತ್ತು.

ಕೆರೆ ದುರಸ್ತು ಮಾಡಿಸುವ ವಿಚಾರವಾಗಿಯೂ ಚಂದ್ರ-ಚಿನ್ನಯ್ಯರು ಕೂಡಿ ಸರ್ಕಾರದೊಡನೆ ಹೊಡೆದಾಡುತ್ತಿದ್ದರು. ಆದರೆ ಇನ್ನೂ ಏನೂ ಫಲಿಸಿರಲಿಲ್ಲ.

ಇಷ್ಟರಲ್ಲಿ ನರಸಿಂಹಯ್ಯನವರಿಗೆ ಅಲ್ಲಿಂದ ವರ್ಗವಾಯಿತು. ಅವರಿದ್ದದ್ದು ಚಂದ್ರಶೇಖರನ ಕೆಲಸದಲ್ಲಿ ಎಷ್ಟೋ ಸಹಾಯವಾಗಿತ್ತು. ಈಚೀಚೆಗಂತೂ ಚಂದ್ರಶೇಖರನ ಮನೆತನದ ಜಂಜಡದಿಂದ ವಯಸ್ಕರ ಶಿಕ್ಷಣಶಾಲೆಯ ಭಾರ ಅವರ ತಲೆಯ ಮೇಲೆಯೇ ಬಿದ್ದಿತ್ತು. ಚಂದ್ರಶೇಖರನ ಭಾವ ಕೆಂಪಣ್ಣ, ಖಾದಿಯಕೇಂದ್ರ ನೋಡಿಕೊಳ್ಳುತ್ತಿದ್ದ. ನರಸಿಂಹಯ್ಯನ ವರ್ಗದಿಂದ ಚಂದ್ರಶೇಖರನ ಒಂದು ಕೈಯೇ ಮುರಿದ ಹಾಗಾಗಿತ್ತು.

ಅವರ ವರ್ಗವನ್ನು ವಜಾ ಮಾಡಿಸಲು ಚಂದ್ರಶೇಖರನೂ ಚಿನ್ನಯ್ಯನೂ ಎಷ್ಟೆಷ್ಟೋ ಪ್ರಯತ್ನಪಟ್ಟರು. ಮೇಲಧಿಕಾರಿಗಳನ್ನು ಕಂಡು, ಇನ್ನು ಕೆಲವು ಕಾಲ ಅವರನ್ನು ಇಲ್ಲೇ ಉಳಿಸಿಕೊಡಿ, ಎಂದರು. ಆದರೆ

ಅವರು ಆ ಊರಿಗೆ ವರ್ಗವಾಗಿ ಬಂದು ಬಹುಕಾಲವಾಗಿತ್ತು. ಆದ್ದರಿಂದ ಸಾಧ್ಯವಿಲ್ಲ, ಎಂದರು.

ಚಂದ್ರಶೇಖರ – ಚಿನ್ನಯ್ಯರುಗಳು ನಿರಾಶರಾಗಿ ಊರಿಗೆ ಹಿಂದಿರುಗಿದರು.

ನರಸಿಂಹಯ್ಯನವರು ಆ ಊರು ಬಿಟ್ಟು ಹೊರಡಲು ಹಿಂದಿನ ದಿವಸ ಚಂದ್ರಶೇಖರ ಅವರಿಗೆ ಒಂದು ಔತಣವೇರ್ಪಡಿಸಿದ್ದ. ಚಿನ್ನಯ್ಯನೂ ಅದಕ್ಕೆ ಬಂದಿದ್ದ.

ಮರುದಿನ ಅವರನ್ನು ಬೀಳ್ಕೊಡುವಾಗ ಚಂದ್ರಶೇಖರನೂ ನರಸಿಂಹಯ್ಯನೂ ಒಬ್ಬರನ್ನೊಬ್ಬರು ಅಪ್ಪಿಕೊಂಡು ಕಣ್ಣೀರಿಟ್ಟರು ಅವರ ವೇದನೆ ಕಣ್ಣೀರಿನ ರೂಪದಲ್ಲಿ ಹೊರಬಿತ್ತು

ಚಂದ್ರಶೇಖರ ಅವರೊಡನೆ ಅಷ್ಟುದೂರ ಹೋಗಿ, ಕೊನೆಗೆ, ಹಿಂದಿರುಗಲೇಬೇಕಾಗಿ ಬಂದಾಗ, ಹಿಂದಿರುಗಿದ

ಅವರ ಬದಲಾಗಿ ಬಂದ ಉಪಾಧ್ಯಾಯರು ಇಳಿವಯಸ್ಸಿನಲ್ಲಿ ಕಾಲಿಟ್ಟದ್ದರು. ಅವರ ಸಂಸಾರ ನಂದಗೋಕುಲ ಅವರಿಗೆ ತಮ್ಮ ಮಕ್ಕಳ ನಿರ್ವಹಣವೇ ಸಾಕುಸಾಕಾಗಿ ಹೋಗುತ್ತಿತ್ತು

ಅವರೊಡನೆ ಈ ವಯಸ್ಕರ ಶಿಕ್ಷಣದ ವಿಚಾರವೆತ್ತಿದಾಗ, 'ನಿಮ್ಮೂರಿನ ಸುದ್ದೀನೇ ನಂಗೆ ಬೇಡಪ್ಪ ಸರ್ಕಾರದವರು ಕೊಡೋ ಸಂಬಳಕ್ಕೆ ಕರಿಕ್ಯುಲಂ ಪ್ರಕಾರ ಪಾಠ ಒದರಿಬಿಡುತ್ತೇನೆ ಹಿಂದಿನ ಗ್ರಾಮದಲ್ಲಿ ಇಂಥ ಕೆಲಸ ಮಾಡ್ತಾ ಇದ್ದವರ ಮನೇ ಕಡೆ ತಲೆ ಹಾಕಿಕೊಂಡು ಮಲಗಿದ್ದಕ್ಕೇನೇ ನನ್ನ ಮೇಲೆ ಸರ್ಕಾರಕ್ಕೆ ಮೂಗರ್ಜಿ ಹೋಯಿತು. ಇದೋ, ಈಗ ಇಲ್ಲಿಗೆ ವರ್ಗ. ನನಗೆ ಇದರ ಸಹವಾಸಾನೇ ಬೇಡ. ನಮ್ಮಂಥಾವರ ಸಹಾಯ ಅಪೇಕ್ಷಿಸೋದಕ್ಕಿಂತ ನೀವೇ ಸ್ವತಂತ್ರವಾಗಿ ಮಾಡೋದು ಮೇಲು' ಎಂದು ಹೇಳಿದರು.

ಆದ್ದರಿಂದ ಚಂದ್ರಶೇಖರನೇ ಇದಕ್ಕೂ ಹೆಚ್ಚು ಗಮನ ಕೊಡಬೇಕಾಯಿತು. ಕೆಂಪಣ್ಣನೂ ಆಗಾಗ ಸಹಾಯ ಮಾಡುತ್ತಿದ್ದ. ಚಿನ್ನಯ್ಯನಿಗೆ ಉತ್ಸಾಹವಿದ್ದರೂ ಈ ಕೆಲಸ ಇನ್ನೂ ಅವನಿಗೆ ಹೊಸದು.

ಈ ನಡುವೆ ಊರಿನ ಜೀವನಕ್ರಮದಲ್ಲಿ ಕಂಡೂ ಕಾಣದಂತೆ ಇನ್ನೊಂದು ಮಹಾ ವ್ಯತ್ಯಾಸವಾಗುತ್ತಿತ್ತು. ಯುದ್ಧದ ಪರಿಣಾಮವದು. ಯುದ್ಧದಿಂದ ಎಲ್ಲ ಪದಾರ್ಥಗಳಿಗೂ ಗಿರಾಕಿ ಹೆಚ್ಚಿತ್ತು. ಹಾಗೂ ಆಹಾರ ಪದಾರ್ಥಗಳಿಗಿಂತ ಹತ್ತಿ, ಹೊಗೆಸೊಪ್ಪು, ಮುಂತಾದ ಪದಾರ್ಥಗಳ ಧಾರಣೆ ಹೆಚ್ಚಿತ್ತು. ಜಮೀನಿದ್ದವರೆಲ್ಲ ಆಹಾರ ಪದಾರ್ಥ ಬೆಳೆಯುವ ಬದಲು ಇಂಥ ಹಣ ತರುವ ಪದಾರ್ಥ ಬೆಳೆಯಲು ಮೊದಲಿಟ್ಟರು. ಆಹಾರ ಧಾನ್ಯ ಬೆಳೆಯುವ ಭೂಮಿ ಕಡಮೆಯಾಯಿತು. ಬಂಜರು ಬಿದ್ದಿದ್ದ ಎಷ್ಟೋ ಜಮೀನನ್ನಾದರೂ ಇದಕ್ಕೆ ಉಪಯೋಗಿಸಿಕೊಳ್ಳಬಹುದಾಗಿತ್ತು. ಆದರೆ ಆಕಡೆ ಯಾರ ಗಮನವೂ ಹೋಗಲಿಲ್ಲ ಹದಿನೈದು ದಿನಕ್ಕೊ ತಿಂಗಳಿಗೊ ಒಂದು ಬಾರಿ ಸರ್ಕಾರದವರ ಮೋಟಾರೊಂದು ಬರುತ್ತಿತ್ತು. 'ಹೆಚ್ಚು ಆಹಾರ ಬೆಳೆಯಿರಿ' ಎಂದು ಒಬ್ಬರು ಉಪನ್ಯಾಸ ಮಾಡಿ ಹೋಗುತ್ತಿದ್ದರು. ಹಳ್ಳಿಯ ಜನರಿಗೆ ಇದೊಂದು ಪರಿಹಾಸ ಸಂದರ್ಭವಾಗಿತ್ತು.

ಊರಿನ ಸಮೀಪದಲ್ಲಿಯೇ ಒಂದು ರೇಷ್ಮೆಯ ಗಿರಣಿ ಬೇರೆ ಆಗಿತ್ತು. ಇವರಿಂದಲೂ ಅಷ್ಟು ಜಮೀನು ಆಹಾರದಿಂದ ಹಿಪ್ಪನೇರಳೆ ಬೆಳೆಯಲು ವರ್ಗಾಯಿಸಲ್ಪಟ್ಟಿತ್ತು. ಬಂಜರು ಜಮೀನು ಮಾರ್ಪಡಿಸುವ ವಿಚಾರ ಯಾರ ತಲೆಯಲ್ಲೂ ಹೊಳೆಯಲೇ ಇಲ್ಲ

ಈ ಗಿರಣಿ ಬಂದು ಊರ ಜನರಿಗೂ ಹೊಸ ಉದ್ಯೋಗ ದೊರಕಿಸಿಕೊಟ್ಟಿತು. ಜಮೀನು ಬೇಸಾಯಕ್ಕಿಂತ ಇದೇ ಲಾಭದಾಯಕವಾಗಿದ್ದರಿಂದ ಎಷ್ಟೋ ಜನ ಇದನ್ನೇ ಅವಲಂಬಿಸಿದರು. ಸ್ವಲ್ಪ ಬಂಡವಾಳವಿದ್ದವರು ರೇಷ್ಮೆಹುಳು ಸಾಕಲಾರಂಭಿಸಿದರು ಇಲ್ಲದವರು ಗಿರಣಿಯಲ್ಲಿ ಕೂಲಿಗಳಾಗಿ ಸೇರಿದರು.

ಹೀಗೆ ಊರಿನ ಜೀವನದಲ್ಲಿ ಅಗಾಧ ಏರುಪೇರುಗಳಾದವು. ಇದನ್ನೆಲ್ಲಾ ಚಂದ್ರಶೇಖರ ಬಿಟ್ಟ ಕಣ್ಣು ಬಿಟ್ಟಹಾಗೆ ನೋಡುತ್ತಿದ್ದ. ಬೈಸಿಕಲ್ಲು ಸವಾರ ವೇಗವಾಗಿ ಹೋಗುತ್ತಿದ್ದಾಗ ಮುಂದಿನ ಚಕ್ರದ ವೇಗವನ್ನು ಧಟ್ಟನೆ ತಡೆದರೆ ಹಿಂದಿನ ಚಕ್ರ ಮೇಲೆ ನೆಗೆದು ಪರಿಭ್ರಮಣೆಯಾಗುವಂಥ ಅನುಭವವಾಯಿತವನಿಗೆ.

ಈ ಎಲ್ಲ ಬದಲಾವಣೆಗಳೊಡನೆ ಹೊಸ ಸಮಸ್ಯೆಗಳೂ ತಲೆದೋರಿದವು. ಗಿರಣಿಯಲ್ಲಿ ಎಷ್ಟೇ ಅಧಿಕವಾಗಿ ಕೂಲಿ ಕೊಡಲಿ, ಕೆಲಸಗಾರರಿಗೆ ಬೇಕಾಗಿದ್ದ ಅಗತ್ಯವಸ್ತುಗಳ ಬೆಲೆಗಳು ಅವರ ಕೂಲಿ ಹೆಚ್ಚುತ್ತಿದ್ದ ವೇಗಕ್ಕಿಂತ ತ್ವರಿತವಾಗಿ ಓಡುತ್ತಿದ್ದವು. ಇದರಿಂದ ಕೆಲಸಗಾರರಲ್ಲಿ ಅತೃಪ್ತಿ ಬೆಳೆಯುತ್ತಿತ್ತು ಈ ಗಿರಣಿಯ ಮಾಲೀಕರಿಗೂ ಕೆಲಸಗಾರರಿಗೂ ನಡುವೆ ತಿಕ್ಕಾಟ ಪ್ರಾರಂಭವಾಗಿತ್ತು. ಯುದ್ಧ ನಿಂತ ಮೇಲೂ ಈ ಸಮಸ್ಯೆಗಳು ಇನ್ನೂ ಉಲ್ಬಣವಾಗುತ್ತಿದ್ದವು.

ಊರಿನಲ್ಲಿ ಬೆಳೆದ ಆಹಾರವೆಲ್ಲ – ಬೆಳೆದವರ ಅಗತ್ಯವೆಷ್ಟೋ ಅಷ್ಟನ್ನುಳಿದು – ಸರ್ಕಾರಕ್ಕೆ ಹೋಗುತ್ತಿತ್ತು. ಆದರೆ ಅದನ್ನು ಸರ್ಕಾರಕ್ಕೆ ಕೊಡದೆ ಕಳ್ಳತನದಲ್ಲಿ ಮಾರಿದರೆ ಹೆಚ್ಚು ಬೆಲೆ ಕೊಟ್ಟು ಕೊಳ್ಳುವವರೂ ಇದ್ದರು. ಆದ್ದರಿಂದ ಬೆಳೆದವರು ಕಾಳನ್ನು ಸಾಧ್ಯವಾದಷ್ಟೂ ಸರ್ಕಾರಕ್ಕೆ ಕೊಡದೆ ಬಚ್ಚಿಡಲು ಪ್ರಾರಂಭಿಸಿದರು ಸರ್ಕಾರದ ಯಂತ್ರ ಇದನ್ನು ತಡೆಗಟ್ಟಲು ಅಸಮರ್ಥವಾಗಿತ್ತು. ಸ್ವತಃ ಬೆಳೆಯದ ಎಷ್ಟೋ ಜನಕ್ಕೆ ಆಹಾರ ದುರ್ಲಭವಾಯಿತು.

ಚಂದ್ರಶೇಖರ ಇದನ್ನೆಲ್ಲ ಅಸಹಾಯತೆಯಿಂದ ಸುಮ್ಮನೆ ನೋಡುತ್ತಾ ತನ್ನ ಕಾರ್ಯವನ್ನು ತಾನು ಮುಂದುವರಿಸಿದ. ಆದರೆ ಆ ಕಾರ್ಯದಲ್ಲಿ ಯಾರಿಗೂ ಹಿಂದಿನಷ್ಟು ಉತ್ಸಾಹವಿರಲಿಲ್ಲ.

ಈ ನಡುವೆ ಚಿನ್ನಯ್ಯನಿಗೆ ಪ್ರತಿದಿನವೂ ರಾತ್ರಿ ಜ್ವರ ಬರಲುಪಕ್ರಮವಾಯಿತು. ಅನಂತರ ಕೆಮ್ಮೂ ಪ್ರಾರಂಭವಾಯಿತು. ಒಂದು ದಿನ ಕೆಮ್ಮಿದಾಗ ಶ್ಲೇಷ್ಮದ ಜತೆಯಲ್ಲಿ ರಕ್ತವೂ ಬಿತ್ತು.

ಮೊದಮೊದಲು ಅವನು ಇದಕ್ಕೆ ಅಷ್ಟು ಗಮನ ಕೊಡಲಿಲ್ಲ. ತಂಪಾದ ಆರೈಕೆ ಮಾಡಿಕೊಂಡರೆ ಸರಿಹೋಗುವುದೆಂದುಕೊಂಡಿದ್ದ. ಆದರೆ ಬರಬರುತ್ತಾ ರೋಗ ಹೆಚ್ಚಾಯಿತು.

ಆದ್ದರಿಂದ ಆಸ್ಪತ್ರೆಗೆ ಹೋಗಬೇಕಾಯಿತು.

ಸೀಲಾವರದ ಡಾಕ್ಟರು ನೋಡಿ, 'ಮೈಸೂರಿಗೆ ಕರೆದುಕೊಂಡು ಹೋಗಿ' ಎಂದರು. ಜತೆಗೆ ಚಂದ್ರಶೇಖರನೂ ಹೋಗಬೇಕಾಯಿತು.

ಗ್ರಾಮಕಾರ್ಯ ಕೆಂಪಣ್ಣನ ಮೇಲೆ ಸಂಪೂರ್ಣವಾಗಿ ಬಿತ್ತು. ಅವನು ಸ್ವಲ್ಪವೂ ಅಸಮಾಧಾನ ಪ್ರದರ್ಶಿಸದೆ ಉತ್ಸಾಹದಿಂದ ಶಕ್ತಿ ಮೀರಿ ದುಡಿಯುತ್ತಿದ್ದ. ಈ ವೇಳೆಗೆ ಶಿಕ್ಷಣ ತರಗತಿಯಲ್ಲಿ ತರಬೇತಾದವರೂ ಒಬ್ಬಿಬ್ಬರು ಈ ಕಾರ್ಯದಲ್ಲಿ ಅವನಿಗೆ ನೆರವಾಗುತ್ತಿದ್ದರು

ಚಿನ್ನಯ್ಯ ಮೈಸೂರಿನ ಆಸ್ಪತ್ರೆಯಲ್ಲಿ ಒಂದು ತಿಂಗಳು ಇದ್ದ. ವೈದ್ಯರು ಅವನ ಆಸೆ ಬಿಟ್ಟರು ಒಂದು ದಿನ ಚಂದ್ರಶೇಖರನಿಗೆ ಆ ಮಾತು ತಿಳಿಸಿದರು.

ವೈದ್ಯರಿಗಿಂತ ಮುಂಚೆ ಚಿನ್ನಯ್ಯನಿಗೇ ತಾನು ಬದುಕುವುದಿಲ್ಲವೆಂದು ಗೊತ್ತಾಗಿತ್ತು. ತನಗೆ ತನ್ನವರೆಂದು ತನ್ನ ಹೆಂಡತಿ, ಚಂದ್ರಶೇಖರ ಇವರಲ್ಲದೆ ಬೇರೆ ಯಾರೂ ಇರಲಿಲ್ಲ ಒಂದು ಮಗು ಕೂಡ ಇರಲಿಲ್ಲ. ಹೆಂಡತಿ ಬದುಕಲು ಎಷ್ಟಾಗಬೇಕು? ಉಳಿದ ಆಸ್ತಿಯೆಲ್ಲ ಊರ ಉದ್ಧಾರಕ್ಕೆ ವಿನಾಸಲಾಗಲಿ ಎಂದು ಅವನ ಬಯಕೆ

ಒಂದು ದಿನ ಚಂದ್ರಶೇಖರನೊಡನೆ ಈ ಮಾತು ಎತ್ತಿದ. ಚಂದ್ರಶೇಖರ,

'ಅದೆಲ್ಲಾ ಈಗ ಬೇಡ. ನಿನ್ನ ಕಾಯಿಲೆ ಗುಣವಾದ ಮೇಲೆ ಮಾತಾಡೋಣ ಅಷ್ಟೊಂದು ನಿರಾಶೆ ಇರಬಾರದು' ಎಂದ. ಆದರೆ ಅವನ ಹೃದಯವನ್ನೂ ಕೂಡ ದೂರದ ನೋವೊಂದು ಮೀಂಟುತ್ತಿತ್ತು.

ಒಂದು ದಿನ ಚಿನ್ನಯ್ಯ ಚಂದ್ರಶೇಖರನೊಂದಿಗೆ, 'ನನ್ನನ್ನು ಊರಿಗೇ ಕರೆದುಕೊಂಡು ಹೋಗು ನಮ್ಮ ನೆಲದ ಮೇಲೇ ನಾನು ಪ್ರಾಣ ಬಿಡಬೇಕು' ಎಂದು ಹೇಳಿದ. ಚಂದ್ರಶೇಖರನೆಷ್ಟು ಹೇಳಿದರೂ ಕೇಳಲಿಲ್ಲ. ದಿನೇ ದಿನೇ ಅವನ ಬಲವಂತ ಅಧಿಕವಾಯಿತು ವೈದ್ಯರೂ ಕೂಡ 'ಅವನ ಮಾತು ನಡಸಿಕೊಡಿ' ಎಂದು ಹೇಳಿದರು.

ಭಾರವಾದ ಮನಸ್ಸಿನಿಂದ ಚಂದ್ರಶೇಖರ ಚಿನ್ನಯ್ಯನೊಡನೆ ಊರಿಗೆ ತೆರಳಿದ.

ಊರಿಗೆ ಬಂದ ಮೇಲೆ ಅವನಲ್ಲಿ ಸ್ವಲ್ಪ ಗೆಲವು ಕಂಡಿತು. ಆದರೆ ಈ ಗೆಲವು ಬಹುಕಾಲವಿರಲಿಲ್ಲ. ಒಂದು ದಿನ ಸಂಜೆ ಚಿನ್ನಯ್ಯ ಹೆಂಡತಿಯನ್ನೂ ಚಂದ್ರಶೇಖರನನ್ನೂ ಬಳಿಗೆ ಕರೆದ. ಆಪ್ತರೆಲ್ಲಾ ಬಳಿಯಲ್ಲೇ ಇದ್ದರು ಮುಳುಗುವ ಸೂರ್ಯ ಹೊಂಬಣ್ಣದ ಬಿಸಿಲನ್ನು ಕೊಟಡಿಯೊಳಗೆ ಚೆಲ್ಲಿದ್ದ ಚಿನ್ನಯ್ಯ ಬಿಸಿಲು ಬರುತ್ತಿದ್ದ ಆ ಕಿಟಕಿಯತ್ತ ನೋಡುತ್ತ,

'ಚಂದ್ರ, ನಂದೆಲ್ಲಾ ಇನ್ನು ಗಂಟೆಯ ಲೆಕ್ಕ' ಎಂದ.

ಚಂದ್ರ, 'ಹಾಗೆಲ್ಲಾ ಹೇಳಬೇಡ, ಚಿನ್ನಣ್ಣ' ಎಂದು ಹೇಳಿ ಅವನಿಗೆ ಕಾಣದಂತೆ ಕಣ್ಣೀರೊರಸಿಕೊಂಡ.

'ಮೊದಲೇ ನಂಗೆ ದೇವರು ಒಳ್ಳೇ ಬುದ್ದಿ ಕೊಟ್ಟಿದ್ರೆ ನಿಂ ಕೆಲಸ ಎಷ್ಟೋ ಹಗುರ ಆಗ್ತಾ ಇತ್ತು. ಹೋಗಲಿ ದೇವರು ನಿನ್ನ ಕೆಲಸದಲ್ಲಿ ಜಯಾ ಕೊಡಲಿ ಪುನರ್ಜನ್ಮ ನಿಜಾ ಆದ್ರೆ ನಾ ಇಲ್ಲೇ ತಿರುಗಿ ಹುಟ್ತೇನಿ' ಎಂದ. ಅವನ ನೋಟ ಕಿಟಕಿಯ ಚೌಕಟ್ಟಿನಲ್ಲಿ ಕಾಣುತ್ತಿದ್ದ ಅನಂತಾಕಾಶದಲ್ಲಿ ನೆಟ್ಟಿತ್ತು.

'ಪಾಪ, ನನ್ ಹೆಂಡ್ತಿ ಇನ್ನೂ ಅರೀದವಳು. ಅವಳು ನನ್ನಲ್ಲಿ ಏನು ಸುಖಾನೂ ಕಾಣಲಿಲ್ಲ. ಅವಳ ಸುಖಕ್ಕೆ ಏನಾದ್ರೂ ದಾರಿ ಇದೆಯೇನೋ, ಚಂದ್ರಾ?' ಎಂದ,

ಅವನ ಹೆಂಡತಿ ಶೂನ್ಯ ಹೃದಯದಿಂದ ಕಣ್ಣೀರಿನ ಕೋಡಿ ಹರಿಯಿಸುತ್ತಿದ್ದಳು.

'ಏನು ಮಾಡೋದೋ ಏನೊ! ಇರೋದು ಒಂದೇ ದಾರಿ ಅನುಸರಿಸೋ ಎದೆಗಾರಿಕೆ ಬೇಕು' ಎಂದ, ಚಂದ್ರ.

ಚಿನ್ನಯ್ಯನ ಪ್ರಶ್ನೆಯನ್ನು ಚಂದ್ರಶೇಖರ ನಿರೀಕ್ಷಿಸಿರಲಿಲ್ಲ. ಅಂತೆಯೇ ಅವನ ಉತ್ತರವೂ ಅನಿರೀಕ್ಷಿತವಾಗಿಯೇ ಅವನ ಬಾಯಿಂದ ಹೊರ ಬಿತ್ತು. ಅನಂತರ ಯೋಚಿಸಿದಾಗ ಈ ಸಮಸ್ಯೆಯು ಕರಾಳರೂಪ ಅವನ ಕಣ್ಣಿಗೆ ಕಟ್ಟಿತು. ಅವನು ಇದುವರೆಗೂ ಜೀವನದ ಈ ಮುಖ ಕುರಿತು ಯೋಚಿಸಿರಲಿಲ್ಲ

ಅಂದು ಸಂಜೆ ಊರಿನವರನ್ನೆಲ್ಲ ಕಣ್ಣೀರಿನ ಕಡಲಿನಲ್ಲಿ ನೂಕಿ ಚಿನ್ನಯ್ಯ ಹೊರಟುಹೋದ.

ಚಂದ್ರಶೇಖರನಂತೂ ದುಃಖದಿಂದ ಕವಿದುಬಿದ್ದ. ತಂದೆ ಸತ್ತಾಗ ಕೂಡ ಅವನು ಇಷ್ಟು ಅಧೀರನಾಗಿರಲಿಲ್ಲ. ಚಿನ್ನಯ್ಯನ ಹೆಂಡತಿಯ ಭವಿಷ್ಯವೂ ಅವನ ಎದೆ ಬಿರಿಯಿಸಿತ್ತು

೧೬

ಚಿನ್ನಯ್ಯ ಸತ್ತು ಒಂದು ವರ್ಷವಾಗಿತ್ತು. ಈ ಒಂದು ವರ್ಷದಲ್ಲಿ ಪರಿಸ್ಥಿತಿಯೇನೂ ಉತ್ತಮಗೊಂಡಿರಲಿಲ್ಲ. ಆದರೆ ಈ ಒಂದು ವರ್ಷ ಕಾಲದಲ್ಲಿ ದೇಶದಲ್ಲೇನೊ ಅಘಟಿತ ಘಟನಾವಳಿಗಳು ನಡೆದುಹೋಗಿದ್ದವು. ನಾಡು ಸ್ವಾತಂತ್ರ್ಯ ಗಳಿಸಿಕೊಂಡಿತ್ತು ಸ್ವಾತಂತ್ರ್ಯದ ಹಿಂದೆಯೇ ದ್ವೇಷಕಾಂಡದ ಪಾರಾಯಣವೂ ಆಯಿತು ಮಾಯಂದಹಳ್ಳಿಯ ಜನ ಮಾತ್ರ ಈ ಸ್ವಾತಂತ್ರ್ಯದಿಂದ ತಮ್ಮ ಮೇಲೆ ಏನೂ ಪರಿಣಾಮವೇ ಆಗಲಿಲ್ಲವೇನೋ ಎಂಬಂತೆ ಎಂದಿನಂತೆ ತಮ್ಮ ಜೀವನ ಪಥದಲ್ಲಿ ಸಾಗಿದ್ದರು. ಚಂದ್ರಶೇಖರ ತನ್ನ ದೀಕ್ಷಾಕಾರ್ಯವನ್ನು ಮುಂದು ವರಿಸಿದ್ದ.

ಒಂದು ಸಂಜೆ ಚಂದ್ರಶೇಖರ ಊರಪಕ್ಕದಲ್ಲಿದ್ದ ಗುಡ್ಡದ ಮೇಲೆ ಸುತ್ತಾಡಿಕೊಂಡು ಬರಲು ಹೊರಟ ಗುಡ್ಡ ಏರಿ ಅದರ ತಲೆ ಮುಟ್ಟಿದ. ಸುತ್ತಣ ಹಸುರು ಪೈರು ನೆಲಕ್ಕೆ ಪಚ್ಚೆಯುಡಿಗೆ ತೊಡಿಸಿದ ಹಾಗಿತ್ತು. ಹಳ್ಳದಲ್ಲಿದ್ದ ಹೊಂಗೆಯಮರಗಳು ದಟ್ಟೆಲೆ, ಬಿಳಿ ಹೂ ತೊಟ್ಟು ಸೊಂಪಾಗಿ ನಿಂತಿದ್ದವು. ಅದರ ಮೇಲಣ ಕೋಗಿಲೆಯ ಗಾನ ಆಗಸದ ತಂತಿಯನ್ನೆ ಮಿಡಿಂಟುತ್ತಿತ್ತು ಚಂದ್ರಶೇಖರ ಊರಿನತ್ತ ಮುಖ ತಿರುಗಿಸಿ ಹಸುರು ನೆಲದ ಮೇಲೆ ಕೂತ

ಅವನ ತಲೆಯ ಹಿಂದಣ ಮೋಡವೊಂದು ಗುಡ್ಡದ ಮೇಲೆ ನೆರಳು ಹರಡಿತ್ತು. ಆದರೆ ದೂರದ ಕಣಿವೆಯ ತೋಪಿನ ಮರದ ನಡುವೆ ನಿಂತಿದ್ದ ಊರು ಹೊಂಬಿಸಿಲಲ್ಲಿ ಮಿಂದು ನಿಂತಿತ್ತು.

ನಡುನಡುವೆ ಮನೆಯೊಂದರಿಂದ ಹೊರಟ ಅಡುಗೆಯ ಹೊಗೆ ಸುಳಿಗಾಳಿಗೆ ಸಿಲುಕಿ ಅತ್ತಿತ್ತ ಚಲಿಸುತ್ತಿತ್ತು.

ತನ್ನ ಸುತ್ತಣ ನೆರಳನ್ನೂ ದೂರದ ಆ ಬಿಸಿಲನ್ನೂ ಕಂಡು ಚಂದ್ರಶೇಖರನಿಗೆ ಲಾಂಗ್ ಫೆಲೋ ಕವಿಯ ವಾಕ್ಯವೊಂದು ನೆನಪಿಗೆ ಬಂತು.

'ತಲೆಯ ಮೇಲೆ ಮುಗಿಲ ಹಿಂದೆ
ಅವಿತುಕೊಂಡು ಕುಳಿತ ಸೂರ್ಯ
ದೂರ ದೂರ ಹೊಲದ ಮೇಲೆ
ಹೊನ್ನ ಬಿಸಿಲು ಚೆಲ್ಲಿದಂತೆ
ಹಳೆಯ ನೆನಪು ಹರುಷವೀವುದು'

ಇದನ್ನು ನೆನೆದು ಅವನು ಅಂತರ್ಮುಖಿಯಾಗಿ ಆತ್ಮವಿಮರ್ಶೆ ಮಾಡಿಕೊಳ್ಳತೊಡಗಿದ. . .

ಲಾಂಗ್ ಫೆಲೋ ಕವಿ ವಾಕ್ಯಕ್ಕೂ ತನಗೂ ಒಂದು ವ್ಯತ್ಯಾಸವಿತ್ತು. 'ಹಳೆಯ ನೆನಪು ಹರುಷವೀವುದು' ಎಂದು ಲಾಂಗ್ ಫೆಲೋ ಹೇಳಿದ್ದ ತನ್ನ ಹಳೆಯ ನೆನಪೆಲ್ಲ ಹರುಷದಾಯಕವಾಗಿಯೇ ಇರಲಿಲ್ಲ ದುಃಖಮಯವಾಗಿಯೂ ಇತ್ತು. ಆದರೆ ಆ ನೆನಪು ಕಾಲದ ರೂವಾರಿಯ ಕೈಮಾಟಕ್ಕೆ ಸಿಲುಕಿ ಮಾರ್ದವವಾಗಿತ್ತೆಂಬುದೇನೋ ನಿಜ.

ಅವನು ಊರಿನಲ್ಲಿ ನೆಲಸಿ ಹತ್ತಿರ ಹತ್ತಿರ ನಾಲ್ಕು ವರ್ಷವಾಗಿತ್ತು. ಈ ಕಾಲದಲ್ಲಿ ಏನೇನೆಲ್ಲ ಆಗಿ ಹೋಯಿತು! ತನ್ನ ನೇಹದ ಜನರು ಮೂವರು ಒಬ್ಬೊಬ್ಬರಾಗಿ ಅಗಲಿದ್ದರು ಔತಣವೆಲ್ಲ ಮುಗಿದು ಎಲ್ಲರೂ ಎದ್ದು ಹೋದಮೇಲೆ, ಎಂಜಲೆಲೆ ತುಂಬಿದ ನಿರ್ಜನವಾದ ಮಂದಿರವನ್ನು ಹೊಕ್ಕರೆ ಉಂಟಾಗುವ ಅನುಭವವಾಯಿತವನಿಗೆ ಹಾಗೆಂದು ಹೇಳಿದ್ದ ಆಂಗ್ಲ ಕವಿಯೊಬ್ಬನ ಮಾತಿನ ಸತ್ಯ ಅಂದು ಅವನಿಗೆ ನಿಚ್ಚಳವಾಗಿ ಕಂಡಿತು

ಆ ಮೂರು ವರ್ಷದಲ್ಲಿ ತಾನು ಮಾಡಿದ ಕೆಲಸವನ್ನೆಲ್ಲ ಯೋಚಿಸಿದ.

ಊರಿಗೆ ತನ್ನಿಂದ ಏನಾದರೂ. ಸೇವೆ ಸಂದಿದೆಯೇ ಎಂದು ಲೆಕ್ಕ ಹಾಕಿದ. . . .

ಊರಿನ ಜನ ತಮ್ಮ ಸ್ಥಿತಿಯೇನೆಂಬುದನ್ನು ಕಂಡುಕೊಂಡಿದ್ದರು. ಆಸ್ಪತ್ರೆ – ಆರೋಗ್ಯಕೇಂದ್ರ – ಸೂತಿಕಾಗೃಹದ ಕಟ್ಟಡ ಮುಗಿಯುತ್ತಾ ಬಂದಿತ್ತು. ಕಟ್ಟಡಕ್ಕೆ ದೃಷ್ಟಿ ತಾಕದಂತೆ ಗಾರೆಯುವರು ಕುಂಬಳ ಕಾಯೊಂದಕ್ಕೆ ಕಣ್ಣು ಮೂಗು ಬರೆದು ಬಟ್ಟೆ ತೊಡಿಸಿ ಮನುಷ್ಯಾಕೃತಿ ಮಾಡಿ ಮನೆಯ ಮೇಲೆ ಬೊಂಬೊಂದಕ್ಕೆ ನೇತು ಹಾಕಿದ್ದುದನ್ನು ಚಂದ್ರ ಶೇಖರ ಆಗ ತಾನೇ ಕಂಡು ನಕ್ಕು ಬಂದಿದ್ದ.

ಅವನ ಇನ್ನೊಂದು ಕನಸೆಂದರೆ, ಮೂಲ ಶಿಕ್ಷಣದ ರೀತಿಯಲ್ಲಿ ಚಿಕ್ಕಂದಿನಿಂದಲೇ ಮಕ್ಕಳಿಗೆ ಯಾವುದಾದರೊಂದು ಕೆಲಸದ ಮೂಲಕ ವಿದ್ಯೆ ಕಲಿಸುವುದು ಮಕ್ಕಳ ವಿಕಾಸಕ್ಕೆ ಅನುಕೂಲವಾದಂಥ ಶಿಕ್ಷಣ ಕ್ರಮವನ್ನು ತರುವುದು ಇದಕ್ಕಾಗಿಯೂ ಒಂದು ಕಟ್ಟಡ ತಯಾ ರಾಗುತ್ತಿತ್ತು ಕೆಂಪಣ್ಣ ಈ ಶಿಕ್ಷಣ ಕೊಡುವುದರಲ್ಲಿ ಅನುಭವ ಸಂಪಾ ದಿಸಲು ಬೇರೆ ಕೇಂದ್ರವೊಂದರಲ್ಲಿ ಆರು ತಿಂಗಳು ತರಬೇತು ಹೊಂದಿ ಬಂದಿದ್ದ.

ಚಂದ್ರಶೇಖರ ಸರ್ಕಾರದೊಡನೆ ವ್ಯವಹಾರ ಮಾಡಿ ಊರಿನ ಕೆರೆ ಯನ್ನು ದುರಸ್ತು ಮಾಡಿಸಲೂ ಆಜ್ಞೆ ದೊರಕಿಸಿದ್ದ. ಈ ಒಪ್ಪಿಗೆ ದೊರಕ ಬೇಕಾದರೆ ಚಂದ್ರಶೇಖರ ಭಗೀರಥ ಯತ್ನವನ್ನೇ ಮಾಡಬೇಕಾಯಿತು. ಅಂತೂ ಆ ಕನಸೂ ನನಸಾಗುವ ಕಾಲ ಬಂದಿತ್ತು

ಚಂದ್ರಶೇಖರ ಹಾಗೆಯೇ ವ್ಯವಹಾರದ ರಾಜ್ಯದಿಂದ ಕನಸಿನ ರಾಜ್ಯಕ್ಕೆ ಕಾಲಿಟ್ಟ ಅವನ ಮನಸ್ಸು ಚೇತೋವಿಹಾರಿಯಾಯಿತು. ಅವನ ಕಣ್ಣ ಮುಂದೆ ತನ್ನ ಹಳ್ಳಿಯ ಭವಿಷ್ಯದ ಭವ್ಯ ಚಿತ್ರವೊಂದು ಬಂದು ನಿಂತಿತು ಕೆರೆಯ ತುಂಬ ನೀರು ನಿಂತಿತ್ತು ಅದರ ತೂಬಿ ನಿಂದ ನೀರು ಚಿಮ್ಮುತ್ತ ಹರಿದು ಕೆಳಗಿನ ಜಮೀನಿನ ಜೀವರಸವಾಹಿನಿ ಯಾಗಿತ್ತು. ಕಣ್ಣು ಹರಿವ ವರೆಗೂ ಹಸುರು ಬಯಲೇ. ಎಲ್ಲೋ ಕೊನೆಯಲ್ಲಿ—ಭೂಮಿ, ಆಗಸ ಸೇರುವೆಡೆಯಲ್ಲಿ—ಒಂದು ಯಂತ್ರ ನೆಲ ಉಳುತ್ತಿತ್ತು. ಅದೇ ಕೊನೆಯ ತಾಕು ಆ ಯಂತ್ರ ಊರಿನವರಿಗೆಲ್ಲ

ಸೇರಿತ್ತು. ಅಂತೆಯೇ ಊರಿನ ಜನ ಎಲ್ಲರ ಕಾರ್ಯದಲ್ಲೂ ಒಟ್ಟಾಗಿ ಸಹಕರಿಸುತ್ತಿದ್ದರು ಸಹಜವಾಗಿ ಅವರಲ್ಲಿ ಸೋದರತ್ವ ನೆಲಸಿತ್ತು. ತಮ್ಮ ತಮ್ಮಲ್ಲಿ ಏನಾದರೂ ವಿರಸ ಉದ್ಭವಿಸಿದರೆ ಊರಿನ ಪಂಚಾಯತಿಯಲ್ಲೆ ಫೈಸಲ್ ಮಾಡಿಕೊಳ್ಳುತ್ತಿದ್ದರು. ಕೋಮುವಾರು ಗೊಂದಲವಾಗಲಿ ಅಸ್ಪೃಶ್ಯತೆಯ ಕಳಂಕವಾಗಲಿ ಕುಡಿತದ ಕೆಸರಾಗಲಿ ಆ ಊರಿನ ಕೀರ್ತಿಗೆ ಕಳಂಕ ತಂದಿರಲಿಲ್ಲ. ಹತ್ತು ಜನ ದುಡಿಯುತ್ತಲೇ ಇರುವುದು, ಒಬ್ಬ ಸುಖವಾಗಿರುವುದು—ಈ ಸ್ಥಿತಿಯೂ ಇರಲಿಲ್ಲ ಜನರೆಲ್ಲ ಸಂತೋಷದ ಪ್ರತೀಕ ಮಕ್ಕಳು ಬಂಬತ್ತಲೆ ಓಡಾಡುತ್ತಿರಲಿಲ್ಲ. ತುಂಬುಗಲ್ಲದ ಮಿಂಚಿನ ಕಣ್ಣಿನ ಕಿನ್ನರ ಕುಮಾರರು ಅವರು. ಹೆಂಗಸರಾಗಲಿ, ಅಜ್ಞಾನದ ಬೊಂಬೆಗಳಲ್ಲ, ಅವರ ಕೋಮಲವಾದ ಹುಬ್ಬಿನಲ್ಲಿ ಜ್ಞಾನಪ್ರಭೆ ಬೆಳಗುತ್ತಿತ್ತು ಅವರ ಬಳುಕು, ಅಬಲೆಯ, ಬಳ್ಳಿಯ ಬಳುಕಾಗಿರಲಿಲ್ಲ; ಉಕ್ಕಿನ ತಂತಿಯ ಬಳುಕಾಗಿತ್ತು. ಊರಿನ ಜನ ವಾರಕ್ಕೊಂದು ದಿನ ಊರೊಟ್ಟಿನ ಕಾರ್ಯಕ್ಕಾಗಿ ಮೀಸಲಿಟ್ಟಿದ್ದರು. ಇನ್ನೊಂದು ದಿನ ಮನರಂಜನೆಗೆ – ವಿಹಾರಕ್ಕೆ – ಮೀಸಲು. ಯಕ್ಷಗಾನ, ಕೋಲಾಟ ಮುಂತಾದ ಹಳೆಯ ಪದ್ಧತಿಗಳೆಲ್ಲ ಹೊಸ ಬೆಡಗಿನಿಂದ ಪುನರ್ಜನ್ಮ ತಾಳಿದ್ದವು. . .

ಅವನು ಈ ಕನಸಿನಲ್ಲೇ ಎಷ್ಟು ಕಾಲ ಕಳೆಯುತ್ತಿದ್ದನೋ. ಅಷ್ಟರಲ್ಲಿ ದಾರಿ ತಪ್ಪಿ ಹಿಂದುಳಿದಿದ್ದ ಕುರಿಮರಿಯೊಂದು ಬಳಿ ಬಂದು ಅವನ ಮುಖದತ್ತ ಮುಖ ತಿರುಗಿಸಿ, 'ಬ್ಯಾ!' ಎಂದಿತು.

ಚಂದ್ರಶೇಖರ ಕಣ್ಣು ಬಿಟ್ಟ. ಆ ಕುರಿಮರಿ ಮತ್ತೆ ಅವನನ್ನು ಸ್ವಪ್ನ ಜಗತ್ತಿನಿಂದ ವಾಸ್ತವ ಜಗತ್ತಿಗೆ ತಂದು ಬಿಟ್ಟಿತ್ತು.

'ಇದೆಲ್ಲಾ ಆದೀತೆ? ನೀ ಕಣ್ಣಾರ ನೋಡುವ ಆಸೆಯಿದೆಯೇ?' ಎಂದು ಕೇಳುವ ಹಾಗಿತ್ತು, ಅವನ ಮುಖದಲ್ಲಿ ಮುಖವಿಟ್ಟಿದ್ದ ಕುರಿಮರಿಯ ಕಾತರದ ಕಣ್ಣು.

'ನಾನೇ ಕಂಡೇನು. ನಾ ಕಾಣದಿದ್ದರೂ ನನ್ನ ಮಗ ಕಂಡಾನು. ರಥೋತ್ಸವದ ಅಂಕುರಾರ್ಪಣವಾಗಿದೆ. ತೇರು ಹೊರಟಿದೆ. ಆದರೆ

ಇದು ಗುಡಿಯ ವಿಗ್ರಹದ ತೇರಲ್ಲ, ಜನಜೀವನ ಮಹಾರಥ. ಇದನ್ನು ತಡೆಯಬಲ್ಲ ಕಲಿ ಯಾರು?.. ..'

ಸಂಜೆಯ ಕೆಂಪು ಆರಿ ಬಹಳ ಹೊತ್ತಾಗಿತ್ತು. ಮೂಡಲಲ್ಲಿ, ಹಳ್ಳಿಯ ದಟ್ಟವಾದ ಹಸುರು ಸೆರಗಿನಿಂದ, ದುಂಡಾದ ಚಂದ್ರ ಇಣಿಕಿ, ಹಳ್ಳಿಯ ಮೇಲೆ ಬೆಳ್ಳಿಯ ಬಲೆ ಬೀಸಿದ್ದ....

ಯಾಕೋ ಏನೋ, ಚಂದ್ರಶೇಖರನಿಗೆ ತಾನು ಅಲ್ಲಿಗೆ ಬಂದ ಪ್ರಥಮ ದಿನದ ಸುಪ್ರಭಾತದಲ್ಲಿ ಪಕ್ಕದ ಮನೆಯ ಹೆಣ್ಣು ಹಾಡುತ್ತಿದ್ದದ್ದು ನೆನಪಿಗೆ ಬಂತು:

'ಬಾಳಯ್ಯ ಬಾಳು ಬಾಳೇಯ ಸುಳಿಯಾಗಿ
ಬಾಳೆ ಸುಳಿಯಲ್ಲಿ ಗೊನೆ ಬಿಟ್ಟು।
ಬಾಳೆ ಸುಳಿಯಲ್ಲಿ ಗೊನೆ ಬಿಟ್ಟು। ಅಣ್ಣಯ್ಯ
ಬಾಳೆಯ ತಂದ ಹೆಸರ್ಹೇಳಿ॥'

ಎಂಬ ಹಾಡು ಅವನ ಕಿವಿಯಲ್ಲಿ ನಿನದಿಸುತ್ತಿತ್ತು.

ಕುರಿ ಮರಿಯನ್ನೂ ಕಂಕುಳಲ್ಲಿ ಎತ್ತಿಕೊಂಡು ಅವನು ಊರಿನತ್ತ ನಡೆದ.

---

Printed at OMKAR PRESS Gowdanpet, Bangalore City